# ಜೀವನ್ ಮತ್ತು ಹನುಮರಿಗೆ ಆಶ್ಚರ್ಯ

## ನೋಡಿ ಮನಗಳ ವೈವಿಧ್ಯ

ಮನುಷ್ಯನ ಮಿದುಳು, ಆಕಾರದಲ್ಲಿ ದೊಡ್ಡದು ಸಾಮರ್ಥ್ಯದಲ್ಲೂ ಹಿಂದು - ಇದುವೆ ಅವನನ್ನು ಉತ್ತಮ ತರ ಪ್ರಾಣಿಯನ್ನು ಮಾಡಿದೆ. ಅವನ ಮನಸ್ಸು ಅವನ ವಿಚಾರಗಳನ್ನು ಹಾಗೂ ಕೃತಿಗಳನ್ನು ನಿಯಂತ್ರಿಸುತ್ತದೆ. ಪ್ರತಿಯೊಬ್ಬರಿಗೂ ತನ್ನದೇ ಆದ ಅಸ್ತಿತ್ವಯು ಮನವಿದೆ - ವಿಚಾರದಲ್ಲಿ, ಐ.ಕ್ಯೂ. ದಲ್ಲಿ ಪ್ರವೃತ್ತಿಯಲ್ಲಿ ಹಾಗೂ ಜ್ಞಾಪಕ ಶಕ್ತಿಯಲ್ಲೂ!



ಜ್ಞಾಪಕ ಶಕ್ತಿ ಎಂದರೆ ಅಂಕೆಗಳನ್ನು ನೆನೆಸುವುದು ಹಾಗೂ ಮನಸ್ಸಿನಲ್ಲೇ ಇಟ್ಟುಕೊಳ್ಳುವುದು. ತುರ್ಕಸ್ತಾನದ ಮಹಮ್ಮದ್ ಹಲಿಜ ಎಂಬುವನು, ಅಕ್ಟೋಬರ್ 14, 1967 ರಂದು 6 ಗಂಟೆಗಳಲ್ಲಿ, ಕುರಾನಿನ 6,666 ಶ್ಲೋಕಗಳನ್ನು ಪಠಣ ಮಾಡಿದನು - ಒಂದು ಜಾಗತಿಕ ವಿಕ್ರಮ!



ಪ್ರವೃತ್ತಿ (ಅಪ್ಟಿಟ್ಯೂಡ್) ಎಂದರೆ ಒಂದು ವಿಶಿಷ್ಟ ಕ್ಷೇತ್ರದಲ್ಲಿ ಕೌಶಲ್ಯವನ್ನು ಪಡೆಯುವ ಸಾಮರ್ಥ್ಯ. ಬಾಬಿ ಫಿಶರ್ ಗೆ (ಜನನ ಮಾರ್ಚ್ 9, 1943) ಚದುರಂಗದಾಟದಲ್ಲಿ ಅದ್ವಿತೀಯ ಪ್ರವೃತ್ತಿಯಿದೆ, ಅವನ ಐ.ಕ್ಯೂ. 187, ಅಂತರ್ರಾಷ್ಟ್ರೀಯ ಶ್ರೇಷ್ಠ ತಜ್ಞನ ಪದವಿಯನ್ನು (ಇಂಟರ್‌ನ್ಯಾಶನಲ್ ಗ್ರಾಂಡ್ ಮಾಸ್ಟರ್ ಟೈಟಲ್) ಅತ್ಯಂತ ಕಡಿಮೆ ವಯಸ್ಸಿನಲ್ಲೇ ಅಂದರೆ 15ನೇ ವರ್ಷಕ್ಕೆ ಗಳಿಸಿದ್ದ!





ವಿಚಾರ ಮಾಡುವಾಗ ನಿಮ್ಮ ಮನಸ್ಸು ಅನುಭವಿಸುತ್ತದೆ. ಕಾರ್ಯ ಪ್ರವೃತ್ತವಾಗುತ್ತದೆ. ಹಾಗೂ ಮನೋಭಾವಗಳನ್ನು ಕಲ್ಪಿಸುತ್ತದೆ. ಸರ್ವಕಾಲಕ್ಕೂ ಶ್ರೇಷ್ಠನೆಂದು ತಿಳಿಯಲ್ಪಡುವ ವಿವೇಚಕನಾದ ಪ್ಲೇಟೋ (ಕ್ರಿ.ಪೂ. 427-347) ಗ್ರೀಕ ತತ್ವಜ್ಞಾನಿಯಾಗಿದ್ದನು. ನಿಜವಾದ ಜ್ಞಾನವು ಶಾಶ್ವತವಾಗಿದೆ ಎಂದು ಅವನು ನಂಬಿದ್ದನು.

ಐ.ಕ್ಯೂ. (ಇಂಟೆಲಿಜನ್ಸ್ ಕೋಶಂಟ್) ಅಂದರೆ, ಒಬ್ಬನ ವಯಸ್ಸಿಗೂ ಅವನ ಮಾನಸಿಕ ವಯಸ್ಸಿಗೂ ಇರುವ ಪ್ರಮಾಣ. ಐ.ಕ್ಯೂ. ವನ್ನು ಅಂಕೆಗಳಲ್ಲಿ ಅಳೆಯುತ್ತಾರೆ. 100 ಸರಾಸರಿ ಮಾನವನದು. 150 ಇದು ಪ್ರತಿಭಾವಂತಿಯ ಮಟ್ಟವಾಗಿದೆ. ಕಿಮ್ ಉಂಗ್-ಯಾಂಗ್ ಎಂಬ ಕೊರಿಯಾ ವಾಸಿಯ ಐ.ಕ್ಯೂ. ಪರಮಾವಧಿ ಎತ್ತರದ್ದು ಎಂದು ದಾಖಲೆಗೊಂಡಿದೆ. ಅದು 210 ಆಗಿದೆ.



ನಿಮ್ಮ ಭವಿಷ್ಯವನ್ನು ಸಂರಕ್ಷಿಸುವ ಅತ್ಯಂತ ಸುರಕ್ಷಿತ ಚತುರ ದಾರಿಯೇ ಜೀವವಿಮೆ.



ಭಾರತೀಯ
ಜೀವವಿಮಾ ನಿಗಮ

daCunha/LIC/107 KAN

# ಚಂದಮಾಮ ಕ್ಯಾಮಲ್

## ಬಣ್ಣಹಾಕುವ ಸ್ಪರ್ಧೆ

ಪ್ರವೇಶಧನವಿಲ್ಲ





**ಬಹುಮಾನ ಗಳಿಸಿರಿ.**

ಕ್ಯಾಮಲ್—ಪ್ರಥಮ ಬಹುಮಾನ ರೂ. 15
ಕ್ಯಾಮಲ್—ದ್ವಿತೀಯ ಬಹುಮಾನ ರೂ. 10
ಕ್ಯಾಮಲ್—ತೃತೀಯ ಬಹುಮಾನ ರೂ. 5
ಕ್ಯಾಮಲ್—5 ಪ್ರೋತ್ಸಾಹಕ ಬಹುಮಾನಗಳು
ಕ್ಯಾಮಲ್—10 ಸರ್ಟಿಫಿಕೇಟ್‌ಗಳು

ಕೇವಲ 12 ವರ್ಷದ ವರೆಗಿನ ಪ್ರಾಯದ ವಿದ್ಯಾರ್ಥಿಗಳು ಭಾಗವಹಿಸಬಹುದು ■ ಮೇಲಿನ ಚಿತ್ರಕ್ಕೆ ಯಾವುದೇ 'ಕ್ಯಾಮಲ್' ಬಣ್ಣಗಳಿಂದ ಬಣ್ಣ ಹಾಕಿರಿ ■ ಬಣ್ಣ ಹಾಕಿದ ಪ್ರವೇಶಪತ್ರಗಳನ್ನು ಕೆಳಗಿನ ವಿಳಾಸಕ್ಕೆ ಕಳಿಸಿರಿ

**P.B. No. 9928**, COLABA, Bombay-400 005.

ಫಲಿತಾಂಶವು ಅಂತಿಮ ನಿರ್ಣಯವಾಗಿದೆ, ಮತ್ತು ಇದರ ಸಲುವಾಗಿ ಪತ್ರವ್ಯವಹಾರಕ್ಕೆ ಗಮನ ಕೊಡಲಾಗುವುದಿಲ್ಲ.

Name............................................ Age ..................................

Address.........................................................................................

ದಯವಿಟ್ಟು ನಿಮ್ಮ ಹೆಸರು ಮತ್ತು ವಿಳಾಸವನ್ನು ಇಂಗ್ಲಿಷಿನಲ್ಲಿ ಬರೆಯಿರಿ.

ದಯವಿಟು ಚಿತ್ರವನ್ನು ಪೂರ್ತಿಯಾಗಿ ಬಣ್ಣದಿಂದ ತುಂಬಿರಿ.

ಪ್ರವೇಶಪತ್ರಗಳನ್ನು ಕಳುಹಿಸುವ ಕೊನೆಯ ತಾರೀಕು: 31-7-1981

VISION

**CONTEST NO.20**

—ಚುಕ್ಕೆ ಗೆರೆಯ ಉದ್ದಕ್ಕೂ ಕತ್ತರಿಸಿರಿ.—




ಪರಿಚಯಾತ್ಮಕ
ಕೊಡುಗೆ
25 ಪೈಸೆ
ರಿಯಾಯಿತಿ

**ಇದೋ!**
**ಪೆಪ್ಪರ್‌ಮಿಂಟ್ ರುಚಿ ಸೇರಿದ**
**ಒಂದು ಚಾಕೋಲೇಟ್ ಬಿಸ್ಕೆಟ್**

# ಸ್ಕ್ರನ್‌ಚ್

## ಕರಕರನೆ ತಿನ್ನಲು ಒಳ್ಳೆಯ ತಿಂಡಿ

ಇಂಡಿಯಾದಲ್ಲಿ, ಇದೇ ತರಹ ಎರಡು ರುಚಿಗಳು ಸಂಯುಕ್ತಗೊಂಡಿರುವ, ಮಧುರವಾದ ತಿಂಡಿ ಎಂದರೆ, ಇದೇ ಮೊದಲನೆಯದು. ಚಾಕೋಲೇಟ್ ಮತ್ತು ಅದರಲ್ಲಿ ಸೇರಿದ ಮಿಂಟ್. ಮೃದುವಾದ, ರುಚಿಕರವಾದ, ಮಿಂಟ್‌ಸೇರಿದ, ಸಮೃದ್ಧಿತ ಚಾಕೋಲೇಟ್‌ಕ್ರೀಮ್— ಇದನ್ನು ಗರಿಗರಿಯಾಗಿರುವಂತೆ ಬೇಯಿಸಿದ, ಸುಂದರವಾದ ಹೊಂಬಣ್ಣದ ಎರಡು, ಬಿಸ್ಕೆಟ್‌ಗಳ ನಡುವೆ ಇಟ್ಟರೆ, ಆಹಾ! ಎಂತಹ ರುಚಿ! ನೀವು ಹಿಂದೆಂದೂ ಸವಿಯದೆ ಇರುವಂತಹ ರುಚಿ...ಇಂದೇ ಒಂದು ಪ್ಯಾಕೆಟ್ ಬಿಸ್ಕೆಟ್ ಕೊಳ್ಳಿರಿ. ಕರಕರನೆ ತಿನ್ನಿರಿ...ಸ್ಕ್ರನ್‌ಚ್... ಸ್ಕ್ರನ್‌ಚ್... ಸ್ಕ್ರನ್‌ಚ್...



**ಸ್ಕ್ರನ್‌ಚ್ ಕರಕರನೆ ತಿನ್ನಲು ಒಳ್ಳೆಯ ತಿಂಡಿ**

ಟ್ರೂ ಬಿಸ್ಕೆಟ್‌ಗಳ ತಯಾರಕರು ಪ್ರಸ್ತುತಗೊಳಿಸಿರುವ ಹೊಸ ತಿಂಡಿ.

HTM-AFL-2345

# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'

ಸಂಚಾಲಕರು : ನಾಗಿರೆಡ್ಡಿ

ನಿಜವಾದ ಅಪರಾಧಿಗಳ ಬದಲಿಗೆ ನಿರಪರಾಧಿಗಳು ಸಿಕ್ಕಿಬಿದ್ದು ಶಿಕ್ಷೆ ಅನುಭವಿಸುವುದು ಆಗಾಗ ನಡೆಯುವಂತಹುದೇ. ಆದ ಮಾತ್ರಕ್ಕೆ ರಾಜನೊಬ್ಬನು ದೂರುಗಳನ್ನೇ ತರಬಾರದೆಂದರೆ, ತನ್ನ ತಪ್ಪನ್ನು ತಿದ್ದಿಕೊಂಡಂತೆ ಆಗುವುದೆಂದು ಭ್ರಮಿಸಿದುದು, ಎಂತಹ ವಿಪರೀತಕ್ಕೆ ಹೋಗುವುದೆಂದು "ನೆರೆಹಾವಳಿ" ಎಂಬ ಕಥೆಯಲ್ಲಿ ನೋಡಬಹುದು. ದೂರುಹೇಳುವುದು ಚಾಡಿಯಾಗಿ ನಿಕೃಷ್ಟ ಗುಣವೆನಿಸಿದರೂ, ಲೋಕವ್ಯವಹಾರದಲ್ಲಿ ವಿಚಾರಣೆಗೆ ಚಾಲನೆ ಕೊಡುವಂತಹ ದೂರುಗಳೂ ಬೇಕಾದಂತಹವೇ.

## ಅಮರವಾಣಿ

**ಜೀರ್ಯಂತೇ ಜೀರ್ಯತಃ ಕೇಶಾಃ ದಂತಾ ಜೀರ್ಯಂತಿ ಜೀರ್ಯತಃ**
**ಜೀರ್ಯತಃ ಚಕ್ಷುಷೀ ಶ್ರೋತ್ರೇ ತೃಷ್ಣೈಕಾ ತರುಣಾಯತೇ**

ವೃದ್ಧಾಪ್ಯದಲ್ಲಿ ಮನುಷ್ಯನಿಗೆ ತಲೆಕೂದಲುದುರಿ, ಹಲ್ಲುಗಳು ಕಳಚಿ, ಕಣ್ಣುಗಳು ಕಾಣದೆ, ಕಿವಿಗಳು ಕೇಳಿಸದೆ ಹೋದರೂ ಅವನ ಆಶೆ ಮಾತ್ರ ನವಯೌವನದಲ್ಲೇ ಇರುತ್ತದೆ.

ಸಂಪುಟ : ೬೭ ಜೂಲೈ '೮೧ ಸಂಚಿಕೆ : ೧

**ಬಿಡಿ ಪ್ರತಿ ರೂ. ೧-೭೫ : : ವಾರ್ಷಿಕ ಚಂದಾ ರೂ. ೨೧-೦೦**




CHITRA




ಚಂದ್ರಪುರವೆಂಬ ರಾಜ್ಯದಲ್ಲಿ ಒಬ್ಬರಾಜನಿದ್ದನು. ಅವನ ಹೆಸರು ಪ್ರತಾಪ ಮಹಾರಾಜ. ಒಂದು ಸಾರಿ ಅವನು ಯಾರೋ ಹೇಳಿದ ದೂರನ್ನು ಕೇಳಿ ನಿರಪರಾಧಿಯೊಬ್ಬನಿಗೆ ಅನ್ಯಾಯವಾಗಿ ಗಲ್ಲಿನ ಶಿಕ್ಷೆ ವಿಧಿಸಿ ಬಿಟ್ಟನು. ಅವನನ್ನು ಗಲ್ಲಿಗೇರಿಸಿದ ಮೇಲೆ ನಿಜ ಸಂಗತಿ ಹೊರಬಿದ್ದು, ಅವನು ಏನೂ ಅರಿಯದ ನಿರಪರಾಧಿ ಎಂದು ಗೊತ್ತಾಯಿತು. ಈ ಸಂಘಟನೆ ಯಿಂದ ಮಹಾರಾಜನ ಹೃದಯವು ಕಲಕಿ ಹೋಯಿತು. ಪಶ್ಚಾತ್ತಾಪಪಟ್ಟು, ಇನ್ನು ಮುಂದೆ ಹಾಗಾಗದಿರಲು ಗಟ್ಟಿಯಾದೊಂದು ಕ್ರಮವನ್ನು ಕೈಕೊಂಡನು. ತಾನಿನ್ನು ಯಾವ ದೂರನ್ನೂ ಕೇಳ ಕೂಡದು, ಯಾರಾದರೂ ತನ್ನ ಬಳಿಗೆ ದೂರು ಹೇಳಲು ಬಂದರೆ ಅವರು ಕಠಿಣವಾದ ಶಿಕ್ಷೆಗೆ ಗುರಿಯಾಗುವರು, ಹೀಗೆ ಶಾಸನದಂತಹ ಕಟ್ಟಪ್ಪಣೆ ಯನ್ನೇ ಮಾಡಿಬಿಟ್ಟನು ಪ್ರತಾಪ ಮಹಾರಾಜ. ಆ ಶಾಸನದ ಪ್ರಕಾರ ಯಾರೂ ಯಾರನ್ನು ಕುರಿತೂ ಕೆಟ್ಟ ಮಾತುಗಳನ್ನು ಹೇಳಕೂಡದು.

ಈ ಶಾಸನವನ್ನು ನೋಡಿ ಮಂತ್ರಿಗೆ ತಳಮಳ ವಾಯಿತು. ಅವನು ಒಮ್ಮೆ ಪ್ರತಾಪ ಮಹಾರಾಜ ನೊಂದಿಗೆ, "ಮಹಾಪ್ರಭೂ! ನನ್ನದೊಂದು ಅಭಿಪ್ರಾಯವನ್ನು ಲಾಲಿಸಬೇಕು. ದೂರುಗಳನ್ನು ಕೇಳುವುದರಿಂದ ತಪ್ಪಾಗಲಾರದು. ಅದನ್ನು ಕೇಳಿ ನಂಬಿ ಬಿಡುವುದೇ ತಪ್ಪು. ತಾವು ದೂರುಗಳನ್ನು ಕೇಳುವುದನ್ನೇ ಬಿಟ್ಟರೆ ದೇಶದಲ್ಲಿ ಅನ್ಯಾಯಗಳು ಹೆಚ್ಚಾದಾವು. ಆಲೋಚಿಸಿಬೇಕು ಪ್ರಭೂ!" ಎಂದನು.

"ಅನ್ಯಾಯಕ್ಕೆ ತಲೆಹಾಕಿದವನು ರಾಜಶಾಸನ ವನ್ನು ಧಿಕ್ಕರಿಸುವನೆಂದೇ ಅರ್ಥ. ನಮ್ಮ ಪ್ರಭುತ್ವದ ಅಧಿಕಾರಿಗಳೆಲ್ಲರೂ ವಿಶ್ವಾಸಪಾತ್ರರಾದವರೇ. ಎಲ್ಲರೂ ಪ್ರಮಾಣಮಾಡಿಯೇ ಪ್ರಭುತ್ವ ಉದ್ಯೋ ಗಕ್ಕೆ ಸೇರಿದ್ದಾರೆ. ಅವರ ಮೇಲೆ ನನಗೆ ಗಟ್ಟಿ ನಂಬುಗೆ ಇದೆ. ನೀವು ಸುಮ್ಮನಿರಿ" ಎಂದನು ಪ್ರತಾಪ ಮಹಾರಾಜ.

ಹೀಗಿರಲು ದೇಶದ ಒಂದು ಪ್ರಾಂತದಲ್ಲಿ ವಿಪರೀತವಾಗಿ ಮಳೆಸುರಿದು ನದಿಗಳೆಲ್ಲ ತುಂಬಿ ಉಕ್ಕಿ ಭಾರಿ ನೆರೆಬಂದಿತು. ನದಿಯ ತೀರದಲ್ಲಿದ್ದ ವೀರಾವರ, ಧೀರಾವರ, ಶೂರಾವರ ಎಂಬ ಊರಗಳು ನೆರೆಯ ಆಘಾತಕ್ಕೆ ಒಳಗಾದುವು. ಅನೇಕರ ಮನೆಗಳು ಬಿದ್ದು ಹೋದುವು.

"ವಸುಂಧರ"

ತುಂಬಾ ಆಸ್ತಿ ನಷ್ಟವಾಯಿತು. ಚಾರರಿಂದ ಈ ಸಮಾಚಾರ ತಿಳಿದು ಪ್ರತಾಪ ಮಹಾ ರಾಜನು ಅಲ್ಲಿಗೆ ಹೋಗಿ ಆ ಮೂರು ಗ್ರಾಮ ಗಳನ್ನೂ ನೋಡಿ ಬಂದನು. ಅಲ್ಲಿ ಸಂಭವಿಸಿದ ಅಪಾರ ವಾದ ನಷ್ಟವನ್ನು ನೋಡಿ ಅವನ ಮನಸ್ಸಿಗೆ ಕಳವಳ ವಾಯಿತು. ಆ ಮೂರು ಗ್ರಾಮಗಳಿಗೂ ಅವನು ಮೂವರು ಪ್ರತ್ಯೇಕ ಅಧಿಕಾರಿಗಳನ್ನು ನಿಯಮಿಸಿ, ಒಬ್ಬೊಬ್ಬರ ಸ್ವಾಧೀನಕ್ಕೂ ಲಕ್ಷ ವರಹಗಳನ್ನು ಕೊಟ್ಟು, ನೆರೆಪೀಡಿತರಾದ ಗ್ರಾಮಸ್ಥರಿಗೆ ಸಹಾಯ ಮಾಡಬೇಕೆಂದು ಹೇಳಿದನು. ಆ ಪ್ರಕಾರ ವೀರಾವರಕ್ಕೆ ವೀರಸೇನನೂ, ಧೀರಾವರಕ್ಕೆ ಧೀರ ಸೇನನೂ, ಶೂರಾವರಕ್ಕೆ ಶೂರಸೇನನೂ ರಾಜನ ಆಜ್ಞೆಯನ್ನು ನೆರವೇರಿಸಲು ಹೊರಟರು.



ವೀರಾವರದ ಪ್ರಜೆಗಳು ಏನೂ ಅರಿಯದ ಸಾಧು ಗುಣದವರು. ತಮ್ಮ ಕಷ್ಟಗಳನ್ನು ತಮ್ಮೊಳಗೆ ಹೇಳಿ ಕೊಂಡು ಹೇಗೋ ದಿನ ಕಳೆಯುತ್ತಿದ್ದರು. ವೀರಸೇನನು ಅಲ್ಲಿಗೆ ಹೋಗಿ ತನಗಾಗಿ ದೊಡ್ಡ ದೊಂದು ಭವನವನ್ನು ಕಟ್ಟಿಸಿಕೊಂಡು, ಸ್ವಲ್ಪ ಮಾತ್ರ ಬೆಲೆ ಕೊಟ್ಟು ವ್ಯವಸಾಯಕ್ಕೆ ಯೋಗ್ಯವಾದ ಭೂಮಿಯನ್ನೆಲ್ಲಾ ಕೊಂಡುಕೊಂಡು, ತನ್ನ ದೂರದ ಹತ್ತಿರದ ಬಂಧುಗಳನ್ನೆಲ್ಲಾ ಅಲ್ಲಿಗೆ ಕರೆತಂದು ಸೇರಿಸಿದನು. ಅವರ ಕೈಕೆಳಗೆ ಕೆಲಸ ಮಾಡಲು ಆ ಗ್ರಾಮಸ್ಥರನ್ನೇ ನಿಯಮಿಸಿದನು. ಹೀಗೆ ವೀರಾವರ ದವರೆಲ್ಲಾ ಕೂಲಿಯಾಳುಗಳಾದರು. ರಾಜನು ಮಾಡಿದ ಸಹಾಯವನ್ನು ಕುರಿತು ಅವರಾರಿಗೂ ಗೊತ್ತಾಗದಂತೆ ನೋಡಿಕೊಂಡನು ವೀರಸೇನ.

ಧೀರಾವರಕ್ಕೆ ಹೋದ ಧೀರಸೇನನು, ಅಲ್ಲಿಯ ಪ್ರಜೆಗಳನ್ನು ಪೀಡಿಸಿ ಬದುಕಿಕೊಂಡಿದ್ದ ಒಬ್ಬ ದುಷ್ಟ ನೊಂದಿಗೆ ಸ್ನೇಹ ಮಾಡಿಕೊಂಡನು. ಇಬ್ಬರೂ ಕೂಡಿ ಆ ಊರನ್ನು ತಮ್ಮೊಳಗೆ ಎರಡು ಪಾಲಾಗಿ ಹಂಚಿ ಕೊಂಡು ರಾಜನು ಕೊಟ್ಟ ಧನದಿಂದ ಸುಖಭೋಗ ಗಳನ್ನು ಅನುಭವಿಸಿಕೊಂಡು ಹಾಯಾಗಿ ಇರತೊಡಗಿ ದರು. ಅಲ್ಲಿಯ ಪ್ರಜೆಗಳಿಗೆ ಕೂಡಾ ರಾಜನು ನೆರೆ ಪೀಡಿತರಿಗೆ ಕೊಟ್ಟ ಸಹಾಯದ ಸಂಗತಿ ಗೊತ್ತೇ ಇರಲಿಲ್ಲ.

ಶೂರಾವರನ್ನು ಅನೇಕ ದಿನಗಳಿಂದ ಪಳಗಿಸಿಕೊಂಡ ಕುಬುದ್ಧಿ ದುರ್ಬುದ್ಧಿಗಳೆಂಬ ಇಬ್ಬರು ದುಷ್ಟರು ಬಹಳ ಕಾಲದಿಂದ ಪೀಡಿಸಿಕೊಂಡಿದ್ದರು. ಶೂರಸೇನನು ಅವರೊಂದಿಗೆ ಸೇರಿ ಊರನ್ನು ಮೂರು ಭಾಗ ಗಳಾಗಿ ಹಂಚಿಕೊಂಡು ಸುಖವಾಗಿ ಕಾಲಕಳೆಯ ತೊಡಗಿದನು. ಶೂರಾವರದ ಪ್ರಜೆಗಳಿಗೆ ಕೂಡಾ ರಾಜನು ತಮ್ಮ ಕಷ್ಟನಿವಾರಣೆಗೆ ಮಾಡಿದ ಸಹಾಯ ವನ್ನು ಕುರಿತು ತಿಳಿಯಲೇ ಇಲ್ಲ.

ನೆರೆಯಹಾವಳಿಯಿಂದ ಕಷ್ಟನಷ್ಟಗಳಿಗೆ ಸಿಕ್ಕಿದ ಆ ಮೂರು ಗ್ರಾಮಗಳ ಸಮಾಚಾರವನ್ನು ತನ್ನ ಚಾರರ ಮೂಲಕವಾಗಿ ಮಂತ್ರಿ ಆಗಾಗ ತಿಳಿದುಕೊಳ್ಳುತ್ತಿದ್ದನು. ರಾಜನ ಸಹಾಯವು ಯಾವ ರೀತಿಯಲ್ಲಿ ನಡೆದಿದೆ

ಯೆಂಬುದನ್ನು ತಿಳಿದು ಅವನು ಸಂಕಟಕ್ಕೊಳಗಾದನು. ಆದರೆ ರಾಜನೊಡನೆ ದೂರು ಹೇಳಬಾರದಷ್ಟೆ?

ಕೆಲವು ತಿಂಗಳವರೆಗೆ ನೋಡಿ, ಆ ಮೇಲೆ ಮಂತ್ರಿಗೆ ಸಹಿಸಲಾಗದೆ ರಾಜನ ಬಳಿಗೆ ಹೋಗಿ, "ಮಹಾ ಪ್ರಭು, ತಾವು ಆ ಮೂರು ಊರುಗಳ ಸಹಾಯ ಕ್ಕಾಗಿ ಮೂರು ಲಕ್ಷ ವರಹಗಳನ್ನು ಅಧಿಕಾರಿಗಳ ಹತ್ತಿರ ಕೊಟ್ಟು ಕಳುಹಿಸಿದ್ದೀರಿ. ಆ ಧನವು ಯಾವ ರೀತಿಯಲ್ಲಿ ಎಂತೆಂತಹ ಸಹಾಯಗಳಿಗೆ ವಿನಿಯೋಗ ವಾಯಿತೆಂದು ವಿಚಾರಿಸಿ ತಿಳಿದರೆ ನಿಮಗೊಂದು ಆತ್ಮ ಸಮಾಧಾನವಾದೀತೆಂದು ಜ್ಞಾಪಿಸುತ್ತೇನೆ" ಎಂದನು.

"ಒಳ್ಳೆಯದೇ. ಯಾರನ್ನಾದರೂ ಕಳುಹಿಸಿ ತಿಳಿದು ಕೊಂಡು ಬರಲು ಹೇಳಿರಿ, ಆದರೆ ನನ್ನ ಶಾಸನವು ನೆನಪಿರಲಿ. ನಾನು ನಿಯಮಿಸಿದ ಅಧಿಕಾರಿಗಳ ಮೇಲೆ ಅಪರಾಧ ಹೇರುವಂತಹ ದೂರು ಮಾತ್ರ ನನ್ನ ಕಿವಿಗೆ ಹಾಕಿದವರಿಗೆ ಕಠಿಣಶಿಕ್ಷೆ ಉಂಟೆಂಬುದು ನೆನಪಿದ್ದರಾಯಿತು" ಎಂದನು ಪ್ರತಾಪ ಮಹಾರಾಜ.

ಮಂತ್ರಿ ಆ ಕಾರ್ಯಕ್ಕೆ ಚಮತ್ಕಾರನೆಂಬೊಬ್ಬ ಸಮರ್ಥನನ್ನು ನಿಯಮಿಸಿದನು. ಅವನು ಆ ಮೂರು ಊರುಗಳನ್ನೂ ಚೆನ್ನಾಗಿ ಅವಗಾಹನೆ ಮಾಡಿಕೊಂಡು ಬಂದು ಮಂತ್ರಿಗೆ ಹೇಳಿದನು. ಅದು ಮಂತ್ರಿ ಈ ಮೊದಲು ತಿಳಿದ ವಾರ್ತೆಗಿಂತಲೂ ದಾರುಣವಾಗಿತ್ತು.

"ಇಷ್ಟರ ಮಟ್ಟಿಗೆ ಬಂದಿದೆಯೇ ? ಹೀಗೆಯೇ ಸಾಗಲು ಬಿಟ್ಟರೆ ಅವರು ಪಕ್ಕದ ಊರುಗಳನ್ನೂ ಕಬಳಿಸುತ್ತಾರೆ. ಅಧಿಕಾರಿಗಳ ಮೇಲೆ ರಾಜನವರೆಗೆ ಫಿರ್ಯಾದಿ ಹೋಗುವುದೆಂಬ ಭಯವಿಲ್ಲದ್ದರಿಂದಲೇ ಅವರು ಇಷ್ಟು ನಿರ್ಭಯರಾಗಿ ವರ್ತಿಸುತ್ತಾರೆ. ಇನ್ನು ದೇಶದಲ್ಲಿ ಸಂಕ್ಷೋಭವೋ, ಬಂಡಾಯವೋ ಏಳಬಹುದು. ಈ ವಿವರಗಳನ್ನು ರಾಜನೊಂದಿಗೆ ಹೇಗೆ ಹೇಳುವುದೆಂದು ತಿಳಿಯುವುದಿಲ್ಲ. ರಾಜನ ಶಾಸನ ನನ್ನನ್ನೂ ಬದುಕಲು ಬಿಡಲಾರದು." ಎಂದನು ಮಂತ್ರಿ. ಚಮತ್ಕಾರನು ತಾನೇ ರಾಜನ ಬಳಿಗೆ ಹೋಗಿ ಉಪಾಯವಾಗಿ ಹೇಳುತ್ತೇನೆಂದನು.



ಒಂದು ವೇಳೆ ರಾಜನಿಗೆ ಕೋಪಬಂದರೂ ತನ್ನಂಥ ಒಬ್ಬನ ಬಲಿಯಿಂದ ಊರುಗಳಿಗೆ ಒಳ್ಳೇದೇ ಆಗತ್ತ ದೆಂದು ಒತ್ತಿ ಹೇಳಿ, ಹೊರಟನು ಚಮತ್ಕಾರ.

ಅವನು ರಾಜನ ಬಳಿಗೆ ಹೋಗಿ "ಮಹಾಪ್ರಭು ಗಳಿಗೆ ಜಯವಾಗಲಿ! ತಮ್ಮ ಅಭಿಲಾಷೆಯಂತೆ ನಾನು ನೆರೆಹಾವಳಿಯ ಊರುಗಳನ್ನು ನೋಡಿ ತಮ್ಮ ಧನ ಸಹಾಯವು ಹೇಗಾಗಿದೆ ಎಂಬುದನ್ನೆಲ್ಲ ನೋಡಿ ಬಂದಿದ್ದೇನೆ" ಎಂದನು.

"ಆ ಗ್ರಾಮಗಳು ಹೇಗಿವೆ?" ಎಂದು ಕೇಳಿದನು ರಾಜ. "ತಮ್ಮ ದಯದಿಂದ ಎಲ್ಲಾ ಚೆನ್ನಾಗೇ ನಡೆದಿದೆ. ತಾವು ಕೋಪಿಸಿಕೊಳ್ಳದಿದ್ದರೆ ಚಿಕ್ಕದೊಂದು ವಿಷಯ ವಿಜ್ಞಾಪಿಸುತ್ತೇನೆ" ಎಂದನು ಚಮತ್ಕಾರ.

"ಯಾರ ಮೇಲೂ ದೂರು ಮಾತ್ರ ಹೇಳಬೇಡ. ಶಿಕ್ಷೆ ಕಠಿಣವಾಗಿಯೇ ಇರುತ್ತದೆ" ಎಂದನು ಪ್ರತಾಪ ಮಹಾರಾಜ.

"ದೂರು ಅಲ್ಲವೇ ಅಲ್ಲ. ಒಂದು ಲೋಪದ ವಿಷಯ. ಅದು ತಮ್ಮಿಂದಲೇ ನಡೆದ ಹಾಗೆ ಕಾಣುತ್ತದೆ" ಎಂದನು ಚಮತ್ಕಾರ ಧೈರ್ಯದಿಂದ.

"ಹಾಗೇನು? ನನ್ನಲ್ಲಿಯ ಲೋಪವನ್ನು ತಿದ್ದಿ ಕೊಳ್ಳಲು ನಾನು ಯಾವಾಗಲೂ ಸಿದ್ಧನಿದ್ದೇನೆ. ಅದೇನು ಹೇಳು" ಎಂದನು ರಾಜನು ಹೆಮ್ಮೆಯಿಂದ.

"ವೀರಾವರದೊಂದಿಗೆ ಹೋಲಿಸುವಾಗ ಧೀರಾ ವರಕ್ಕೂ, ಈ ಎರಡರೊಂದಿಗೆ ಹೋಲಿಸುವಾಗ ಶೂರಾವರಕ್ಕೂ ತುಂಬಾ ಅನ್ಯಾಯವು ನಡೆದಂತೆ ನನ್ನ ಮಂದಬುದ್ಧಿಗೆ ತೋರುವ ಮಾತು. ಅದೇ ನೆಂದರೆ ವೀರಾವರದಲ್ಲಿ ನೆರೆ ಹಾವಳಿಯ ಕಷ್ಟಕ್ಕೆ ಬಿದ್ದವನು ಒಬ್ಬನೇ ಒಬ್ಬನಿದ್ದಾನೆ. ಆ ಊರಿಗೆ ತಾವು ಲಕ್ಷ ವರಹ ಕೊಟ್ಟಿದ್ದೀರಿ. ಅಲ್ಲಿಯ ಪ್ರಜೆಗಳು ತಮ್ಮನ್ನು ಮುಕ್ತಕಂಠದಿಂದ ಕೊಂಡಾಡುತ್ತಾರೆ. ಧೀರಾವರದಲ್ಲಿ ಇಬ್ಬರು ನೆರೆ ಹಾವಳಿಯ ಕಷ್ಟದವ ರಿದ್ದಾರೆ. ಆ ಗ್ರಾಮಕ್ಕೆ ಎರಡು ಲಕ್ಷ ಕೊಡಬೇಕಿತ್ತು. ಆದರೆ ತಾವು ಕೊಟ್ಟದ್ದು ಒಂದೇ ಲಕ್ಷ. ಶೂರಾವರ ದಲ್ಲಿ ಮೂವರು ಕಷ್ಟಪಟ್ಟವರನ್ನು ನೋಡಿದೆ. ಅಲ್ಲಿಗೆ ತಾವು ಕೊಟ್ಟದ್ದು ಒಂದೇ ಲಕ್ಷ. ಒಬ್ಬೊಬ್ಬ



ದೀನಾರ್ತನಿಗೆ ನೂರು ನೂರು ವರಹ ಕೊಟ್ಟರೂ ಅದೇ ದೊಡ್ಡ ವಿಶೇಷ. ಹಾಗಿರುವಾಗ ತಾವು ಒಟ್ಟೊಟ್ಟು ನೆರೆ ಹಾವಳಿಯ ಕಷ್ಟಕ್ಕೆ ಸಿಕ್ಕಿಬಿದ್ದವನಿಗೆ ಮೂವತ್ತು ಸಾವಿರಕ್ಕೂ ಮೇಲೆ ಕೊಟ್ಟದ್ದು ಸಣ್ಣ ವಿಶೇಷವೇನಲ್ಲ. ಆದರೆ ಎಲ್ಲರಿಗೂ ಸಮವಾಗಿ ಕೊಟ್ಟಿದ್ದರೆ ಇನ್ನೂ ಚೆನ್ನಾಗಿರುತ್ತಿತ್ತಲ್ಲವೇ ?" ಎಂದನು.

ರಾಜನು ನಕ್ಕು "ಮಂದಬುದ್ಧಿಯವನು ಅಂದದ್ದು ನಿಜವೇ ! ಆ ಗ್ರಾಮಗಳಲ್ಲಿ ಮನೆಮಾರಿಲ್ಲದ ನೂರಾರು ಪ್ರಜೆಗಳನ್ನು ನಾನೇ ನೋಡಿಬಂದಿದ್ದೇನೆ. ನೀನು ಮೂರು ಗ್ರಾಮಗಳಲ್ಲಿ ಸೇರಿ ಆರೇ ಜನರು ಅನ್ನುತ್ತೀಯಾ ! ಒಳ್ಳೇ ಬುದ್ಧಿವಂತನನ್ನೇ ಕಳುಹಿಸಿದ್ದಾರೆ ನಮ್ಮ ಮಂತ್ರಿಗಳು !" ಎಂದನು.

"ಪ್ರಭೂ ! ತಾವು ಒಬ್ಬ ಮಹಾತ್ಮರನ್ನು ಸನ್ಮಾನಿಸಲು ಒಂದು ಮಾಲೆ ಮಾಡಿಸಿ, ಆ ಮಾಲೆ ತಮ್ಮ ಕೈಯಿಂದ ಯಾರನ್ನು ಅಲಂಕರಿಸುವುದೋ ಅವರೇ ಆ ಮಹಾತ್ಮರೆಂದು ನಾವು ತಿಳಿಯುತ್ತೇವೆ, ತಾವು ನೆರೆಹಾವಳಿಯಿಂದ ನೊಂದವರಿಗಾಗಿ ಹಣವನ್ನು ಯಾರ ಹತ್ತಿರ ಕೊಟ್ಟರೋ ಅವರೇ ನೆರೆಹಾವಳಿಯಿಂದ ನೊಂದವರು ಅಂತ ನಾನು ತಿಳಿದುಕೊಂಡೆನು" ಎಂದನು ಚಮತ್ಕಾರ.

"ಹಾಗಂದರೇನು ?" ಎಂದು ಕೇಳಿದನು ರಾಜ.

"ಪ್ರಭೂ, ತಾವು ದೂರುಗಳನ್ನು ಕೇಳಲಾರಿರಿ ತಮ್ಮ ಅಧಿಕಾರಿಗಳೆಲ್ಲರೂ ವಿಶ್ವಾಸಪಾತ್ರರೇ. ನಾನು ಮೂರು ಗ್ರಾಮಗಳಿಗೂ ಹೋದೆ. ತಾವು ನೆರೆ ಹಾವಳಿಯ ಶಮನಕ್ಕಾಗಿ ಕೊಟ್ಟ ಹಣವು ವೀರಾವರದಲ್ಲಿ ಒಬ್ಬನಿಗೂ, ಧೀರಾವರದಲ್ಲಿ ಇಬ್ಬರಿಗೂ ಶೂರಾವರದಲ್ಲಿ ಮೂವರಿಗೂ ಸೇರಿದೆ. ಆದ್ದರಿಂದ ಅವರೇ ನೆರೆ ಹಾವಳಿಗೆ ಈಡಾದವರೆಂದು ನನ್ನ ಮಂದಬುದ್ಧಿಗೆ ತಿಳಿಯಿತು." ಎಂದನು ಚಮತ್ಕಾರ.

ಇದರ ಹಿಂದೆ ಏನೋ ರಹಸ್ಯವಿರಬೇಕೆಂದು ಪ್ರತಾಪ ಮಹಾರಾಜನಿಗೆ ಅನುಮಾನವಾಯಿತು. ಅವನು ಯಾರಿಗೂ ತಿಳಿಯದಂತೆ ಆ ಮೂರು ಊರುಗಳಿಗೂ ಹೋಗಿ, ಅಧಿಕಾರಿಗಳು ಮಾಡಿದ ಅನ್ಯಾಯಗನನ್ನು ತಿಳಿದುಕೊಂಡು ತುಂಬಾ ನೊಂದುಕೊಂಡನು. ಕೂಡಲೇ ಆ ಮೂರು ಗ್ರಾಮಗಳಿಗೂ ಹೊಸ ರೀತಿಯ ಸಹಾಯಗಳನ್ನು ಗೊತ್ತು ಪಡಿಸಿ, ಆ ದುಷ್ಟರನ್ನೆಲ್ಲ ಕಠಿಣ ಶಿಕ್ಷೆಗೆ ಗುರಿಪಡಿಸಿದನು. ಆಮೇಲೆ ಹೊಸ ಶಾಸನವನ್ನು ರದ್ದು ಪಡಿಸಿ, ಫಿರ್ಯಾದಿಗಳನ್ನು ಕೇಳಲಿಕ್ಕೂ ತೊಡಗಿದನು.

ಮಂತ್ರಿ ಜಾಣನಾದ ಚಮತ್ಕಾರನನ್ನು ಸನ್ಮಾನಿಸಿ ಗೌರವಿಸಿದನು. ಆಗಿನಿಂದ ಪ್ರಭುತ್ವದ ಹಣವನ್ನು ಅನ್ಯಾಯವಾಗಿ ಉಪಯೋಗಿಸಿಕೊಂಡವರನ್ನು "ನೆರೆಹಾವಳಿ"ಯವರು ಎನ್ನುತ್ತಿದ್ದರು.






## ೧೪

[ಶಿವದತ್ತನ ಸೈನಿಕರ ಹಿಂದೆ ಸಮರಸೇನನು ಒಂದು ಹಳ್ಳಿಯನ್ನು ಸಮೀಪಿಸಿದನು. ಅಲ್ಲಿ ವ್ಯಾಘ್ರದತ್ತನ ಭಟರು ಹಳ್ಳಿಯನ್ನೇ ಸುಡುತ್ತಿದ್ದರು. ಆಗ ಶಿವದತ್ತನ ಅನುಚರನಿಂದ, ಶಿವದತ್ತನು ಎತ್ತಹೋಗಿರುವನೆಂದು ತಿಳಿಯಿತು. ಆ ದಾರಿಯಲ್ಲಿ ಹುಡುಕುತ್ತಾ ಹೋದ ಸಮರಸೇನಾದಿಗಳು ಗುಡ್ಡಗಳ ನಡುವೆ ಸಿಕ್ಕಿಕೊಂಡರು. ಆಗ ಒಂದು ಆನೆ ಗುಹೆಯಿಂದ ಹೊರಗೆ ಬಂತು.]

ಗುಹೆಯಿಂದ ಹೊರಗೆ ಬಂದ ಆನೆ ಯಾವ ಕಡೆಗೆ ತಿರುಗುವುದೋ? ಅದರ ಹಿಂದೆ ಇನ್ನೂ ಆನೆಗಳು ಬರುತ್ತವೋ? ಅದೆಂಥಾ ಗುಹೆಯೋ? ಎಂಬ ಭೀತಿಯಲ್ಲಿದ್ದರು ಎಲ್ಲರೂ. ದೊಡ್ಡದಾದ ಬಂಡೆಯ ಹಿಂದೆ ನಿಂತಿರುವ ಸಮರಸೇನನು ಆನೆಗೆ ಕಾಣುವಂತಿರಲಿಲ್ಲ. ಅವನೊಂದಿಗಿದ್ದ ಸೈನಿಕರು ಜೀವವನ್ನು ಅಂಗೈಯಲ್ಲಿಟ್ಟುಕೊಂಡು ಯಾವ ಕ್ಷಣದಲ್ಲಿ ಏನಾಗುವುದೋ ಎಂದು ನಡುಗುತ್ತಿದ್ದರು. ದೊಡ್ಡದೊಂದು ಆನೆಗಳ ಮಂದೆಯೇ ಸುರಂಗದೊಳಗಿನಿಂದ ಹೊರಬಿದ್ದು ತಮ್ಮನೆಲ್ಲ ನಜ್ಜುಗುಜ್ಜು ಮಾಡಿ ತುಳಿದು ಬಿಡುವುದೆಂದುಕೊಂಡು ಅವರು ನಡುಗುತ್ತಿದ್ದರು. ಓಡಲಿಕ್ಕೆ ಸಾಧ್ಯವಿಲ್ಲದಂಥ ಚಿಕ್ಕ ಪ್ರದೇಶದಲ್ಲಿ ಅವರೆಲ್ಲ ಸಿಕ್ಕಿ ಬಿದ್ದಿದ್ದರು.

ಹೀಗೆ ಹೆಧರಿಕೊಂಡಿರುವವರ ಕಿವಿಗಳಿಗೆ, ಒಂದೇ ಸಾರಿ ಇಬ್ಬರು ಮೂವರು ಅರಚಿಕೊಂಡಂತೆ ಅಸ್ಪಷ್ಟವಾದ ಆರ್ತನಾದಗಳು ಎಲ್ಲಿಂದಲೋ ಆಗಾಗ ಕೇಳಿ ಬರುತ್ತಿದ್ದುವು. ಆ ಧ್ವನಿ ಗುಹೆಯ ಆಚೆಯ ಕಡೆಯಿಂದ ಹೊರಡುತ್ತಿದ್ದಿತು. ಆದರೆ ಸಮರಸೇನನೂ ಭಟರೂ ಅಡಗಿರುವ ಪ್ರದೇಶದಿಂದ ಹೊರಬೀಳಲು ಹೆದರುತ್ತಿದ್ದರು. ಆವರು ಆ ದೊಡ್ಡ ಆನೆಯನ್ನೇ




ನೋಡಿಕೊಂಡಿರಲು, ಆನೆ ಎಲ್ಲಾ ದಿಕ್ಕುಗಳಿಗೂ ತಲೆಯನ್ನೂ ಮೈಯನ್ನೂ ತಿರುಗಿಸಿ ನೋಡಿ, ಈ ಮೊದಲು ಸಮರಸೇನಾದಿಗಳು ಹೊಕ್ಕು ಬಂದಿದ್ದ ಜಲಪಾತದ ಗವಿಯೊಳಗೇ ಹೊಕ್ಕಿತು. ಸ್ವಲ್ಪ ಹೊತ್ತಿಗೆ ಅದು ಜಲಪಾತದೊಳಗೆ ತೂರಿಕೊಂಡು ಹೋಗುವುದು ಕೂಡ ಪಾರದರ್ಶಕದ ಹಾಗೆ ಕಾಣಿಸಿತು. ಬೇರೆ ಯಾವ ಆನೆಗಳ ಭಯವೂ ಬಾರದೆಂದು ಗಟ್ಟಿಮಾಡಿಕೊಂಡು, ಸಮರಸೇನನು ಅಡಗಿದ್ದ ಬಂಡೆಯ ಮರೆಯಿಂದ ಹೊರಗೆ ಬಂದನು. ಆ ಕೂಡಲೇ ಭಟರುಗಳೂ ಅಡಗಿದ ಪ್ರದೇಶದಿಂದ ಹೊರಬಿದ್ದು ಅವನ ಬಳಿಗೆ ಬಂದರು.

ಗುಹೆಯ ಆಚೆಯ ಕಡೆಯಿಂದ ಹೊರಡುವ ಆರ್ತನಾದವು ಆಗಾಗ ಕೇಳಿಕೊಂಡೇ ಇದ್ದಿತು. ಈಗ ಅವರೆಲ್ಲರ ಲಕ್ಷ್ಯ ಆ ಕಡೆಗೆ ಹರಿಯಿತು.

"ಯಾರೋ ದೊಡ್ಡ ಕಷ್ಟದಲ್ಲಿ ಸಿಕ್ಕಿಕೊಂಡ ಹಾಗಿದೆ" ಎಂದನು ಒಬ್ಬ ಸೈನಿಕ.

"ಹೌದು. ಅದಕ್ಕೆ ಸಂದೇಹವೇ ಇಲ್ಲ. ಆ ಶಬ್ದ ಬರುವ ಕಡೆಯಿಂದಲೇ ಆನೆ ಹಾಗೆ ಹೆದರಿ ಓಡಿ ಬಂದಿತ್ತು. ಅಷ್ಟೊಂದು ಭಯಂಕರವು ಏನಿರಬಹುದು ಅಲ್ಲಿ? ಒಂದು ವೇಳೆ ಶತ್ರುಗಳು ನಮಗಾಗಿಯೇ ಎಂತಹ ಮೋಸದ ಬಲೆಯನ್ನೋ ಹರಡಿರಬಹುದೇ? ಅದು ನಿಜವಾಗಿಯೂ ಆರ್ತನಾದವೋ, ಅಥವಾ..." ಎಂದು ಸಮರಸೇನನು ಹೇಳುವಷ್ಟರಲ್ಲಿ, ಅಲ್ಲೇನೋ ದೊಡ್ಡ ಕಲ್ಲೋಲವೆದ್ದಂತೆ ಹಲವು ಆರ್ತ ಸ್ವರಗಳು ಕರ್ಕಶವಾಗಿ ಎದ್ದುವು. ಏನೋ ದೊಡ್ಡ ಗಂಡಾಂತರವು ಅವರ ಮೇಲೆ ಮಗುಚಿ ಬೀಳುವಹಾಗಿದೆ.

ಇನ್ನು ಆಲೋಚಿಸುತ್ತಾ, ಹೊತ್ತು ಕಳೆಯುವುದು ಒಳ್ಳೆಯದಲ್ಲವೆನಿಸಿತು ಸಮರಸೇನನಿಗೆ. ಗುಹೆಯಾಚೆಗೆ ಆರ್ತನಾದ ಹೊರಡಿಸುವವರು ಶತ್ರುಗಳಾದರೂ, ಮಿತ್ರರಾದರೂ ಏನೋ ತುಂಬಾ ಅಪಾಯದಲ್ಲಿದ್ದಾರೆ. ಧೈರ್ಯದಿಂದ ಹೋಗಿ ಅವರನ್ನು ನೋಡುವುದೇ ಒಳ್ಳೆಯದು.

ಹೀಗೆ ನಿಶ್ಚಯಿಸಿ ಸಮರಸೇನನು ಭಟರಿಗೆ ಎಚ್ಚರಿಕೆ ಹೇಳಿ ಮುಂದೆ ನಡೆದನು. ಆ ಗುಹೆಯೊಳಗೆ ಸ್ವಲ್ಪ ದೂರ ಹೋಗುವಷ್ಟರಲ್ಲಿ ಗುಹೆಯ ಆಚೆಯದ್ವಾರವು ಅವರನ್ನು ಹೊರಬಿಟ್ಟಿತು. ಅಲ್ಲಿ ಮಡುವಿನ ಹಾಗೆ ಒಂದು ಸರೋವರವಿದ್ದಿತು. ಅದರಲ್ಲಿ ಬೀಳಲು ಬಿಟ್ಟ ಕೆಲವು ಮರಗಳೂ ದಟ್ಟವಾಗಿ ಬೆಳೆದ ಜೊಂಡು ಹುಲ್ಲುಗಳೂ ಇದ್ದುವು.

ಸಮರಸೇನನು ನೋಡುತ್ತಾ ಸ್ವಲ್ಪ ಮುಂದೆ ಹೋಗಲು, ಕಾಲು ಮುಳುಗುವಷ್ಟಿದ್ದ ನೀರಿನಲ್ಲಿ ನೆಡಲ್ಪಟ್ಟಿದ್ದ ಮೂರು ಕಂಬಗಳೂ, ಅವುಗಳಿಗೆ ಕಟ್ಟಲ್ಪಟ್ಟಿದ್ದ ಮೂವರು ಮನುಷ್ಯರೂ ಕಂಡು ಬಂದರು. ಅವರೇ ಹೆದರಿ ಬಿದ್ದು ಆಗಾಗ ಕಿರಿಚುತ್ತಿದ್ದಾರೆ. ಸಮರಸೇನನನ್ನು ನೋಡಿದ ಕೂಡಲೇ ಆ ಹತಭಾಗ್ಯರು ಇನ್ನಷ್ಟು ದೊಡ್ಡ ಆರ್ತನಾದಗಳನ್ನು ಅವಸರವಸರವಾಗಿ ಮಾಡತೊಡಗಿದರು.

ಏನು ಸಮಾಚಾರವೆಂದು ಸಮರಸೇನನಿಗೂ ತಿಳಿಯದು. ಅವನ ಭಟರಿಗೂ ತಿಳಿಯದು. ಕಂಬಗಳಲ್ಲಿ ಕಟ್ಟಲ್ಪಟ್ಟಿರುವವರಿಗೆ ತತ್‌ಕ್ಷಣದಲ್ಲಿ ಏನು ಆಪತ್ತು ಕಾದಿದೆಯೋ ಅವರಿಗೆ ಗೊತ್ತಾಗಲಿಲ್ಲ. ಅಲ್ಲೆಲ್ಲಿಯೂ ಬೇರೊಂದು ಪ್ರಾಣಿಯೂ ಇರಲಿಲ್ಲ. ತಮ್ಮನ್ನು ನೋಡಿದರೂ ಸಹ ಅವರೇಕೆ ಅಷ್ಟು ಜೋರಾಗಿ ಕಿರಿಚುತ್ತಾರೆ? ನೀರಿನ ಅಡಿಯಲ್ಲಿ ಯಾರಾದರೂ ಅವರನ್ನು ಕಾಡುತ್ತಿದ್ದಾರೆಯೆ? ಏನಾದರೂ ಮಂತ್ರಮಾಯೆ ನಡೆದಿದೆಯೆ?

ಕಂಬಕ್ಕೆ ಕಟ್ಟಲ್ಪಟ್ಟವರ ಹತ್ತಿರ ಹೋಗ ಬೇಕಾದರೆ ಸಮರಸೇನನು ನೀರಿಗೆ ಇಳಿದು ಸ್ವಲ್ಪ ದೂರ ನಡೆಯಲೇಬೇಕು. ಮಡುವಿನ ನೀರು ಅಷ್ಟೇನೂ ಆಳವಾಗಿಲ್ಲವೆಂದು ಅಲ್ಲೆಲ್ಲ ಬೆಳೆದಕೊಂಡು ಹುಲ್ಲುಗಳಿಂದ ಊಹಿಸಬಹುದಾಗಿತ್ತು. ಸಮರಸೇನನು, ಕತ್ತಿಯನ್ನೂ, ಬಾಣಗಳ ಬತ್ತಳಿಕೆಯನ್ನೂ ಜಾಕರೂಕತೆಯಿಂದ ಸಿದ್ಧಪಡಿಸಿಕೊಂಡು, ನೀರಿಗೆ ಇಳಿದು ಜೊಂಡುಗಳನ್ನು ಸರಿಸುತ್ತಾ ಮುಂದೆ ಸಾಗತೊಡಗಿದನು. ಸೈನಿಕರು ಅವನನ್ನು ಅನುಸರಿಸಿ ತೀರದಲ್ಲಿ ನಡೆಯುತ್ತಿದ್ದರು. ಇದ್ದಕ್ಕಿದ್ದ ಹಾಗೆ ಕಂಬದಲ್ಲಿ ಬಂಧಿತರಾದ ಮೂವರೂ ಒಮ್ಮೆಗೇ ಮತ್ತೊಮ್ಮೆ ಕೆಟ್ಟ ದನಿಯಿಂದ ಕೂಗಿದರು. ಮರುಕ್ಷಣದಲ್ಲಿ ಸರೋವರದ ನೀರೆಲ್ಲಾ ಅಲ್ಲಕಲ್ಲೋಲವಾಯಿತು. ಸಮರಸೇನನು ಬೆರಗಾಗಿ ನೋಡುತ್ತಿರಲು, ಇದಿರಿನಲ್ಲಿದ್ದ ಆಳವಾದ ಮಡುವಿನ ಕಡೆಯಿಂದ ದೊಡ್ಡದೊಂದು ಮೊಸಳೆ ಬ್ರಹ್ಮಾಂಡವಾದ ಬಾಯಿಯನ್ನು ತೆರೆದು, ದೊಡ್ಡದಾದ ಕೋರೆ ಹಲ್ಲುಗಳನ್ನು ಚಾಚಿಕೊಂಡು ಮುಂದಕ್ಕೆ ಬರುತ್ತಿದ್ದಿತು. ಕಂಬದಲ್ಲಿ ಕಟ್ಟಲ್ಪಟ್ಟವರ ಆರ್ತನಾದಗಳಿಗೆ ಅದೇ ಕಾರಣವೆಂದು ಈಗ ಸಮರಸೇನನಿಗೆ ಗೊತ್ತಾಯಿತು.

ಸಮರಸೇನನು ಕತ್ತಿಯನ್ನು ಒರೆಗಿಳಿಸಿ, ಬಾಣವನ್ನು ತೆಗೆದು ಬಿಲ್ಲಿಗೆ ಹೂಡಿ ನಾರನ್ನೆಳೆದು ಗುರಿನೋಡ ತೊಡಗಿದನು. ಮೊಸಳೆ ಬಾಲವನ್ನು ಕುಣಿಸಿಕೊಂಡು, ವೇಗವಾಗಿ ಮುಂದಕ್ಕೆ ಬರುತ್ತಿರಲು, ಆಳವಿನೊಳಗೆ ಬಂದ ಕೂಡಲೇ ಸಮರಸೇನನು






ಬಾಣವನ್ನು ಬಿಟ್ಟನು. ಮೊಸಳೆಯ ತೆರೆದ ಬಾಯೊಳಗೆ ಗಂಟಲಲ್ಲಿ ಚುಚ್ಚಿಕೊಂಡಿತು ಆ ಬಾಣ. ಈ ಪೆಟ್ಟಿನಿಂದ ಮೊಸಳೆ ನೀರಿನಲ್ಲಿ ಹೊರಳಾಡುತ್ತ, ಮತ್ತೆ ಮುಂದೆ ಬರತೊರಗಿತು. ಈಗ ಅದರ ಕಣ್ಣುಗಳು ಕೋಪದಿಂದ ಮಿರಿಮಿರಿ ಹೊಳೆಯುತ್ತಿದ್ದುವು.

ತಡಮಾಡದೆ ಸಮರಸೇನನು ಕತ್ತಿಯನ್ನು ಎತ್ತಿಕೊಂಡು ಅದರ ಮೇಲೆ ಲಂಘಿಸಿ, ಅದರ ಬೆನ್ನಿನ ಮೇಲೆ ಬಲವಾಗಿ ಎರಡು ಸಾರಿ ಹೊಡೆದನು. ಇದು ಮೊಸಳೆಗೆ ಮರಣಾಘಾತವಾಗಿ ಪರಿಣಮಿಸಿ ನೀರಿನಲ್ಲಿ ಚಡಪಡಿಸ ತೊಡಗಿತು. ಅದುವರೆಗೂ ಭಯಕಂಪಿತರಾಗಿ ನೋಡುತ್ತಿದ್ದ ಕಂಬದಲ್ಲಿ ಕಟ್ಟಲ್ಪಟ್ಟ ಆರ್ತರು, ಪ್ರಾಣದ ಮೇಲೆ ನಂಬುಗೆಯುಂಟಾಗಿ "ಬದುಕಿದೆವಪ್ಪಾ" ಎಂದು ಕೂಗಿಕೊಂಡರು.

ಸಮರಸೇನನು ಅವರ ಬಳಿಗೆ ಹೋಗಿ ಅವರ ಮುಖಗಳನ್ನು ನೋಡಿದ ಕೂಡಲೇ "ಆ! ನೀವಾ!" ಎಂದು ಅತ್ಯಾಶ್ಚರ್ಯದಿಂದ ಕೂಗಿದನು. ಆ ಮೂವರೂ, ಸಮರಸೇನನೊಂದಿಗಿದ್ದ ಅವನ ಸಂಗಾತಿ ಸೈನಿಕರೇ. ಹುಲಿಯ ಗುಹೆಯೊಳಗಿಂದಾಗಿ ಅವನು ವ್ಯಾಘ್ರದತ್ತನ ಭಟರ ಕೈಗೆ ಸಿಕ್ಕಿ ಬೀಳುವವರೆಗೂ ಅವನೊಂದಿಗಿದ್ದವರೇ! ಆದರೆ ಮೂವರೇ ಇರುವರಲ್ಲ? ನಾಲ್ಕನೆಯವನೆಲ್ಲಿ? ಅವನಿಗೇನಾಯಿತು? ಆ ಮೊಸಳೆ ನುಂಗಿಬಿಟ್ಟಿತೆ?

ತಮ್ಮ ಒಡೆಯನ ಗುರುತು ಹಿಡಿದ ಕೂಡಲೇ ಆ ಮೂವರು ಸೈನಿಕರೂ ಆನಂದಾಶ್ಚರ್ಯಗಳಿಂದ, "ಆಹಾ! ನಮ್ಮ ದೊರೆಗಳು! ನಮ್ಮ ಪ್ರಾಣಗಳನ್ನು ಉಳಿಸಿದರು! ನಮ್ಮನ್ನು ಕಾಪಾಡಿದರು! ಸೇನಾನಿ ದೊರೆಗಳೇ! ಇನ್ನು ಈ ಜನ್ಮದಲ್ಲಿ ನಾವು ನಿಮ್ಮನ್ನು ನೋಡುವೆವೆಂದುಕೊಳ್ಳಲಿಲ್ಲ" ಎಂದನು ಗದ್ಗದಿತನಾಗಿ ಒಬ್ಬ ಸೈನಿಕ.

"ನೀವು ಮೂವರೇ ಇದ್ದೀರಲ್ಲಾ? ನಾಲ್ಕನೇಯವನೆಲ್ಲಿ?" ಎಂದು ಸಮರಸೇನನು ಕೇಳಿದನು.

"ಅವನನ್ನು ನೀವು ಕೊಂದ ಮೊಸಳೆ ಹೊಟ್ಟೆಯೊಳಗೆ ಹಾಕಿಕೊಂಡಿತು. ಆಮೇಲೆ ನೀರು ಕುಡಿಯಲು ಬಂದ, ಒಂದು ಆನೆಯನ್ನೂ ನುಂಗಿತು. ಆದಾದ ಮೇಲೆ ನಮ್ಮ ಕಡೆಗೆ ಬರುವಾಗಲೇ ನಿಮ್ಮಿಂದ ಸತ್ತುಹೋಯಿತು! ನೀವು ಸ್ವಲ್ಪ ತಡ ಮಾಡುತ್ತಿದ್ದರೆ ನಾವೂ ಆ ಮೊಸಳೆಗೆ ಬಲಿಯಾಗುತ್ತಿದ್ದೆವು, ನೀವು ನಮ್ಮ ಪಾಲಿನ ದೇವರಾದಿರಿ" ಎಂದರು ಸೈನಿಕರು.

"ನನ್ನ ಸಂಗಾತಿಗಳಲ್ಲಿ ಇನ್ನೊಬ್ಬನೂ ಮೊಸಳೆಗೆ ಬಲಿಯಾದನೆ? ಹುಂ! ನಿಮ್ಮನ್ನು ಈ ಕಂಬಗಳಲ್ಲಿ ಕಟ್ಟಿದವರು ಯಾರು?" ಎಂದು ಸಮರಸೇನನು ಕೇಳಿದನು.

ಅಷ್ಟರಲ್ಲಿ ಸಮರಸೇನನಿಂದ ಕಟ್ಟುಬಿಚ್ಚಲ್ಪಟ್ಟ ಆ ಸೈನಿಕರು ಮಡುವಿನಿಂದ ಮೇಲೆ ಬರುತ್ತ, ನಡೆದ ಸಮಾಚಾರವನ್ನು ಕೆಲವೇ ಮಾತುಗಳಲ್ಲಿ ಹೇಳಿದರು. ಅವರು ತಮ್ಮ ನಾಯಕನನ್ನು ಹುಡುಕುತ್ತ. ಆ

ಗುಹೆಯೊಳಗೆ ಹೊಕ್ಕು ಹಿಂದಿನ ದ್ವಾರದಿಂದ ಹೊರಗೆ ಬಂದು ಈ ಕಡೆಗೇ ಬಂದಿದ್ದಾರೆ. ಆಗ ವ್ಯಾಘ್ರದತ್ತನ ಭಟರು ಅವರನ್ನು ಬಂಧಿಸಿ, ಅವನ ಆಜ್ಞೆಯಂತೆ ಈ ಮಡುವಿಗೆ ತಂದು ಆ ಮೂರು ಕಂಬಗಳಿಗೆ ಕಟ್ಟಿದ್ದಾರೆ. "ಒಬ್ಬನನ್ನು ಮೊದಲೇ ಮೊಸಳೆಯ ಬಾಯಿಗೆ ಹಾಕಿ ಬಿಟ್ಟರು. ನಾವು ಒಬ್ಬರ ತರುವಾಯ ಒಬ್ಬರಂತೆ ಅದಕ್ಕೆ ನೈವೇದ್ಯ ವಾಗುತ್ತಿದ್ದೆವು. ಅವರು ನಮ್ಮನ್ನು ಇಲ್ಲಿ ಕಟ್ಟಿ ಹಾಕಿ ಹೋಗಿ ಬಹಳ ಹೊತ್ತೇನೂ ಆಗಲಿಲ್ಲ. ಆ ಮರಗಳ ಹಿಂದೆ ಹೋಗಿ ನೋಡಿದರೆ ಅವರು ಹೊರಟು ಹೋದ ಕಾಲುದಾರಿಯ ಚಹರೆ ಕಾಣಬಹುದು" ಎಂದರು ಸೈನಿಕರು.

ಎಲ್ಲರೂ ಆ ಕಡೆಯ ಮರಗಳಾಚೆಗೆ ಹೋಗಿ ನೋಡಿದರು, ದೂರದಲ್ಲಿ ತನ್ನ ಭಟರೊಂದಿಗೆ ಸಾಲಾಗಿ ನಡೆದು ಹೋಗುತ್ತಿದ್ದವನು ವ್ಯಾಘ್ರದತ್ತ ನೆಂದು ಸಮರಸೇನನಿಗೆ ಗೊತ್ತಾಯಿತು. ಹಾಗಾದರೆ ಇದೆಲ್ಲಾ ಆ ವ್ಯಾಘ್ರದತ್ತನ ಆಳವಿನೊಳಗಿನ ಪ್ರದೇಶ ವೆಂದೇ ಆಯಿತು. ಅವನ ನೆನಪಿನಿಂದ ಸಮರಸೇನನಲ್ಲಿ ಕೋಪ ಉಕ್ಕಿತು. ಕರಕರನೆ ಹಲ್ಲು ಕಡಿದನು. ತನ್ನ ಜತೆಯಲ್ಲಿರುವ ಈ ಸ್ವಲ್ಪ ಮಾತ್ರ ಸೈನಿಕರೊಂದಿಗೆ ತನ್ನಿಂದೇನೂ ಆಗದೆಂದು ಗೊತ್ತಾಗಿ ನಿಟ್ಟುಸಿರಿಟ್ಟನು. ಎಲ್ಲಕ್ಕೂ ಮೊದಲು ಆ ಶಿವದತ್ತನು ಎಲ್ಲಿರುವ ನೆಂಬುದನ್ನು ತಿಳಿಯುವುದು ಮುಖ್ಯವಾಗಿತ್ತು. ಶಿವದತ್ತನ ಸೂಚನೆಯಂತೆಯೇ ಬಂದುದರಲ್ಲಿ ತಪ್ಪಾಗಿರಬಹುದೇ ಎಂಬ ಅನುಮಾನವೂ ಕುರುಕುರು ಅನ್ನುತ್ತಿತ್ತು.

ಹೀಗೆ ಸಮರಸೇನನು ಆಲೋಚಿಸಿಕೊಂಡಿರುವಾಗ, ಸೈನಿಕನೊಬ್ಬನು ಮರದ ಮೇಲೆ ನೋಡುತ್ತ, "ಅದೇನದು ?" ಎಂದನು ಸಣ್ಣದನಿಯಿಂದ. ಅಲ್ಲಿ ಮರದಕೊಂಬೆಯಲ್ಲಿ ಒಂದು ಕಾಗದವು ನೇತಾಡಿ ಕೊಂಡಿತ್ತು. ಸಮರಸೇನನು ಆಶ್ಚರ್ಯಪಡುತ್ತ ಆ



ಕಾಗದದ ಕಡೆಗೆ ಹಾರಿ ಕಿತ್ತುಕೊಂಡು ಬಿಡಿಸಿ ನೋಡಿದನು. ಅದರಲ್ಲಿ ಹೀಗೆ ಬರೆಯಲ್ಪಟ್ಟಿತ್ತು:

"ಇದು ಅತ್ಯಂತ ಭಯಂಕರವಾದ ಪ್ರದೇಶ. ಬಹು ಬೇಗನೇ ಈ ಪ್ರಾಂತದಿಂದ ಹೊರಟು ಹೋಗಿಬಿಡಿರಿ"

ಇದು ಶಿವದತ್ತನು ಮಾಡಿದ ಎಚ್ಚರಿಕೆಯೇ ಇರ ಬೇಕೆಂದು ಸಮರಸೇನನು ಊಹಿಸಿದನು. ಆ ಕಾಗದ ವನ್ನು ಬಹಳ ಗಡಿಬಿಡಿಯಿಂದ ಬರೆದಿರುವಂತೆ ಸಾಲು ತಪ್ಪಿದ ಅಕ್ಷರಗಳನ್ನು ನೋಡಿದರೆ ಗೊತ್ತಾಗುತಿತ್ತು. ಅಂತೂ ಬೇಗನೇ ಅಲ್ಲಿಂದ ಹೋಗಿ ಬಿಡುವುದೇ ಒಳ್ಳೆಯದೆನಿಸಿತು ಸಮರಸೇನನಿಗೆ. ಯಾವ ದಿಕ್ಕಿಗೆ ಹೋಗುವುದೋ? ಬಂದ ದಾರಿಯಿಂದಲೇ ಹಿಂದೆ ಹೋಗುವುದು ಒಳ್ಳೆಯದೆಂದುಕೊಂಡನು. ಆಗ ಒಬ್ಬ ಸೈನಿಕನು ಒಂದು ಗುಹೆಯ ಕಡೆಗೆ ಕೈ ತೋರಿಸುತ್ತ, "ಇಲ್ಲಿ ನೋಡಿರಿ. ಆ ಗುಹೆಯ ಕಡೆಗೆ ಅನೇಕ ಮನುಷ್ಯರು ನಡೆದಿರುವಂತೆ ಹೆಜ್ಜೆಗಳ ಗುರುತುಗಳು ಕಾಣುತ್ತಿವೆ" ಎಂದನು.

ಸಮರಸೇನನು ಅಲ್ಲಿರುವ ಹುಲ್ಲು ಸಸಿಗಳನ್ನೂ ಸಣ್ಣ ಸಣ್ಣ ಕಲ್ಲುಗಳನ್ನೂ ಪರೀಕ್ಷಿಸಿ ನೋಡಿದನು. ಸೈನಿಕನ ಮಾತಿನಲ್ಲಿ ನಿಜವಿರುವುದು ಗೊತ್ತಾಯಿತು. ಒಂದುವೇಳೆ ಶಿವದತ್ತನು ಈ ಮಾರ್ಗದಿಂದಲೇ ಪ್ರಯಾಣಿಸಿರಬಹುದೆ? ಅವನು ಗುರುತಿಸಿದ ದಾರಿಯಿಂದಲೇ ತಾವು ಇಲ್ಲಿಯವರೆಗೆ ಬಂದುದರಿಂದ, ಆ ಗುಹೆಯೊಳಗೆ ಹೋಗುವುದೇ ಸರಿಯೆಂದು ತೋರಿತು.

ಸಮರಸೇನನು ಆ ಗುಹೆಯ ಬಳಿಗೆ ಹೋಗಿ ಬಗ್ಗಿ ಒಳಭಾಗವನ್ನು ನೋಡಿದನು. ಒಳಗೆಲ್ಲಾ ಕರೀಕತ್ತಲೆ. ಸೈನಿಕರಲ್ಲಿ ಒಬ್ಬನು ಕೈದೊಂದಿಯನ್ನು ಬೆಳಗಿಸಿದನು. ಆ ಬೆಳಕಿನಲ್ಲಿ ಸಮರಸೇನನೂ ಸೈನಿಕರೂ ಗುಹೆಯೊಳಗೆ ಹೊಕ್ಕರು.

ಗುಹೆಯೊಳಗೆ ಸ್ವಲ್ಪ ದೂರ ಹೋದ ಮೇಲೆ ಅಲ್ಲಿ ಕಂಡ ದೃಶ್ಯವು ಆಶ್ಚರ್ಯದೊಂದಿಗೆ ಭಯವನ್ನೂ ಹುಟ್ಟಿಸುವಂತಿದ್ದಿತು. ಒಂದು ಕಡೆಯಲ್ಲಿ ಕಲ್ಲಿನಿಂದ ಕಡೆಯಲ್ಪಟ್ಟ ದೊಡ್ಡದೊಂದು ಸಿಂಹಾಸನ. ಅದರ ಸುತ್ತಲೂ ಮಾನವಾಕಾರದಲ್ಲಿರುವ ವಿಗ್ರಹಗಳು. ಆ ವಿಗ್ರಹಗಳ ದುಸ್ತು ಮತ್ತು ಆಯುಧಗಳನ್ನು ನೋಡಿದರೆ ಆಟವಿಕರ ವಿಗ್ರಹಗಳಂತಿದ್ದುವು.

"ಇದು ಯಾವನೋ ಹಳೆಯ ಕಾಲದ ಆಟವಿಕ ನಾಯಕನ ಸಮಾಧಿ ಸ್ಥಳವಾಗಿದ್ದೀತು. ಅದೇನಿದ್ದರೂ ಇಂತಹ ಭಯಂಕರ ಕೃತಿಗಳ ಗುಹೆಯನ್ನು ನಾನು ಇದುವರೆಗೂ ನೋಡಲಿಲ್ಲ. ಆಟವಿಕರ ಕ್ರೂರಭಾವದ ವಿಗ್ರಹಗಳನ್ನು ನೋಡುತ್ತಿದ್ದರೆ, ನನಗೆ ಏಕಾಕ್ಷಿ ಮಾಂತ್ರಿಕನನ್ನು ನೋಡಿದ್ದಕ್ಕಿಂತಲೂ ಹೆಚ್ಚು ಭಯಂಕರವೆನಿಸುತ್ತೆ! ಬೇಗ ಇಲ್ಲಿಂದ ಓಡಬೇಕೆನಿಸುತ್ತೆ!" ಎಂದನು ಸಮರಸೇನ.

ಮಾತಿನ ಧಾಟಿಯಲ್ಲಿ ಹಾಗೆ ಹೇಳಿದ ಕೂಡಲೇ ಸಮರಸೇನನು ತುಂಬಾ ನೊಂದುಕೊಂಡನು. ನಾಯಕನಾಗಿರುವವನು ಎಂತಹ ಪರಿಸ್ಥಿತಿಯಲ್ಲಿಯೂ ಭಯಪಡುವುದನ್ನು ಹೊರಗೆಡಹಲೇ ಬಾರದೆಂಬ ಸೂತ್ರವನ್ನು ಥಕ್ಕನೆ ಮರೆತೆನೆಂದು ನೆನಪಾಯಿತು.




ತಮ್ಮ ನಾಯಕನ ಬಾಯಿಂದ ಹೊರಟ ಮಾತನ್ನು ಕೇಳಿದ ಕೂಡಲೇ ಸೈನಿಕರು ವಿಪರೀತವಾದ ಭಯದಿಂದ ಒಬ್ಬರ ಮುಖವನ್ನೊಬ್ಬರು ನೋಡಿಕೊಂಡರು. ತುಂಬಾ ಹೆದರಿದ ಸೈನಿಕನೊಬ್ಬ ಹಿಂದಿರುಗಿ ಓಡಿಬಿಡಲೂ ಹವಣಿಸಿ ಅರ್ಧ ತಿರುಗಿಕೂಡ ನಿಂತನು.

ಈ ಪರಿಸ್ಥಿತಿಯನ್ನು ಗಮನಿಸಿ ಸಮರಸೇನನು "ಏಕೆ ಹೇಳುವೆನೆಂದರೆ ಇಂತಹ ಹಿಂದುಮುಂದು ತಿಳಿಯದ ಸ್ಥಳದಲ್ಲಿ ಬರೀ ಧೈರ್ಯವೊಂದಿದ್ದರೆ ಸಾಲದು. ಕ್ಷಣ ಮಾತ್ರದಲ್ಲಿ ಓಡಲಿಕ್ಕೂ ತಯಾರಾಗಿರುವಷ್ಟು ಭಯವೂ ಎಚ್ಚರಿಕೆಯೂ ಧೈರ್ಯವಂತನಿಗೆ ಬೇಕು. ಇಲ್ಲಿ ನೋಡಿದ್ದು ಸಾಕು. ಮುಂದೆ ಹೋಗೋಣ" ಎಂದು ಗುಹೆಯ ದ್ವಾರದ ಕಡೆಗೆ ಹೊರಟನು. ಈ ಪ್ರದೇಶವನ್ನು ಎಷ್ಟು ಬೇಗನೇ

ಬಿಟ್ಟರೆ ಅಷ್ಟು ಒಳ್ಳೆಯದೆನಿಸಿತು ಅವನಿಗೆ. ಒಟ್ಟಿನ ಮೇಲೆ ಶಿವದತ್ತನೆಂಬವನನ್ನು ಕಂಡು ಹಿಡಿಯುವುದು ಕಷ್ಟವೆಂದೇ ಸಮರಸೇನನಿಗೆ ಅನಿಸುತ್ತಿತ್ತು. ಅವನ ಗೊಡವೆಯನ್ನು ಬಿಟ್ಟು ತಾನು ಹಿಂದಿರುಗಿ, ಹೊರಟಿರುವ ಸ್ಥಳಕ್ಕೇ ಹೋಗೋಣವೆಂದೂ ತೋರಿತು. ಆದರೆ ಅಲ್ಲಿಕೂಡಾ ಪರಿಸ್ಥಿತಿ ತನಗೇನೂ ಅನುಕೂಲವಾಗಿಲ್ಲ. ಒಂದು ಕಡೆ ಏಕಾಕ್ಷಿ ಮಾಂತ್ರಿಕನ ಭಯ. ಇನ್ನೊಂದು ಕಡೆ ದ್ರೋಹಿಯಾದ ಕುಂಭಾಂಡ.

ಹಾಗಿರುವಾಗ ತನ್ನನ್ನು ವ್ಯಾಘ್ರದತ್ತನಿಂದ ಪಾರು ಮಾಡಿಸಿದ ಶಿವದತ್ತನನ್ನು ನೋಡಬೇಕಾದುದೇ ಉತ್ತಮವೆಂದು ತೋರುತ್ತಿತ್ತು. ದೇವಿಯಿಂದ ಪ್ರಸಾದಿತವಾದ ತ್ರಿಶೂಲವು ಎಲ್ಲಿರುವುದೆಂದು ಶಿವದತ್ತನಿಗೆ ಗೊತ್ತಿರಲೇಬೇಕು. ಏಕಾಕ್ಷಿಗೂ, ಚತುರ್ನೇತ್ರನಿಗೂ ಗುರುವಾದ ಮಹಾ ಶಾಕ್ತೇಯನ ಆ ತ್ರಿಶೂಲಕ್ಕೆ ಅಪ್ರತಿಮವಾದ ಅಮಾನುಷ ಶಕ್ತಿ ಇದ್ದೇ ತೀರಬೇಕು !

ಆ ಶಿವದತ್ತನು ಒಳ್ಳೆಯವನೆಂದು ನಂಬುವುದು ಹೇಗೆ ? ಅವನು ಇನ್ನೊಂದು ಬಗೆಯಲ್ಲಿ ತನಗೆ ಶತ್ರುವೋ ಏನೋ ! ನಿಜವಾದ ಮಿತ್ರನೋ, ಮಿತ್ರನಂತೆ ನಟಿಸುವ ಶತ್ರುವೋ ? ನಾವೆಯೊಳಗಿನ ಧನರಾಶಿ. ಅದನ್ನು ಕಾಪಾಡುವ ನಾಗಕನ್ಯೆ; ಈ ವಿಷಯ ಇವರೆಲ್ಲರಿಗೂ ಗೊತ್ತಿದೆ. ಏಕಾಕ್ಷಿ, ಚತುರ್ನೇತ್ರರೆಂಬ ಮಾಂತ್ರಿಕರು ಮಾತ್ರ ವಲ್ಲದೆ, ಅವುಗಳಿಗಾಗಿ ವ್ಯಾಘ್ರದತ್ತನೂ, ಶಿವದತ್ತನೂ ಪ್ರಯತ್ನಿಸುತ್ತಿದ್ದಾರೆ. ಇವರೆಲ್ಲರ ಹೊಡೆದಾಟಗಳ ನಡುವೆ ತಾನು ಸಿಕ್ಕಿಬಿದ್ದಂತಾಗಿದೆಯೆಂದು ಸಮರ ಸೇನನಿಗೆ ತೋರಿತು,

ಹೀಗೆ ಯೋಚನೆಯ ತಾಕಲಾಟದಲ್ಲಿ ನಡೆಯುತ್ತಾ ಸಮರಸೇನನು ಆ ಗುಹೆಯೊಳಗಿನಿಂದ ಹೊರಗೆ ಬಂದನು. ಇನ್ನು ಯಾವ ಕಡೆಗೆ ದಾರಿತೆಗೆಯುವು ದೆಂಬ ನಿರ್ಣಯಕ್ಕೆ ಬರುವುದರೊಳಗೆ, ಒಮ್ಮೆಗೇ ದೊಡ್ಡದೊಂದು ಕಲಕಲರವವೂ, ಅವುಗಳನ್ನು ಅನುಸರಿಸಿ, ಬಾಣಗಳೂ, ಈಟಿಗಳೂ, ಭಲ್ಲೆಗಳೂ ಅವರ ಮೇಲೆ ಬೀಳತೊಡಗಿದುವು.

" ಶತ್ರುಗಳು ! ಬಗ್ಗಿಕೊಳ್ಳಿರಿ! ಕಲ್ಲುಗಳೆಡೆಯಲ್ಲಿ ಅಡಗಿಕೊಳ್ಳಿರಿ! ಓಡಿರಿ!" ಎಂದು ಸಮರಸೇನನು ಸೈನಿಕರಿಗೆ ಎಚ್ಚರಿಸಿ, ತಾನೂ ಕಲ್ಲು ಗುಂಪುಗಳ ಹಿಂದಿನ ಭಾಗಕ್ಕೆ ಓಡಿದನು.

ದೂರದಲ್ಲಿ ಬೆಟ್ಟದ ಕಲ್ಲುಗಳ ಮೇಲೆ ನಿಂತು ಕೊಂಡು, ಕೆಲಮಂದಿ ಸೈನಿಕರು ಸಮರಸೇನನಿಗೆ ಕಂಡುಬಂದರು. ಅವರು ಯಾರು ? ವ್ಯಾಘ್ರದತ್ತನ ಕಡೆಯವರೋ, ಕುಂಭಾಂಡನ ಕಡೆಯ ಆಟವಿಕರೋ ?

— (ಇನ್ನೂ ಇದೆ)






# ಗಂಧರ್ವನ ಸೋಲು

ಮತ್ತೆ ಮತ್ತೆ ಸುಳಿದು ಬರುವ ಬೇತಾಳದ ಪ್ರಶ್ನೆಗಳನ್ನು ತಕ್ಕ ಉತ್ತರದಿಂದ ಕತ್ತರಿಸುತ್ತಾ ಬರುವ ರಾಜಾ ತ್ರಿವಿಕ್ರಮನು, ಕೊಂಬೆಯಲ್ಲಿ ನೇತಾಡುವ ಶವವನ್ನು ಕೆಳಗಿಳಿಸಿ, ತನ್ನ ಹೆಗಲಿಗೇರಿಸಿಕೊಂಡು ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದೊಳಗಿನ ಬೇತಾಳವು ಮಾತಾಡಲು ತೊಡಗಿ, "ರಾಜಾ, ನೀನು ಈ ವಿಧವಾಗಿ ಬನ್ನಬಡುವುದನ್ನು ನೋಡುತ್ತಾ ಇದ್ದರೆ ನನಗೆ ಯಾಕೋ ಅಯ್ಯೋ ಅನಿಸುತ್ತದೆ. ಶರೀರ ಬಲದಲ್ಲಿ ಮಾನವರು ದೇವತೆಗಳಿಗೆ ಸರಿದೂಗುವವರಲ್ಲ. ಆದರೆ ಬುದ್ಧಿ ಬಲದಲ್ಲಿ ದೇವತೆಗಳನ್ನು ಮಿಂಚುತ್ತಾರೆ ಮನುಷ್ಯರು. ಅಂಥ ಮನುಷ್ಯನೊಬ್ಬನ ಕಥೆಯನ್ನು ಕೇಳಿ ನಿನ್ನನ್ನು ತಿದ್ದಿಕೊಳ್ಳಲು ಸಾಧ್ಯವೋ ನೋಡಿಕೋ, ಕೇಳು" ಎಂದು ಕಥೆಯನ್ನು ಹೇಳಲು ಪ್ರಾರಂಭಿಸಿತು :

ಹಿಂದೆ ಒಂದು ಸಾರಿ ಪ್ರಗಲ್ಭನೆಂಬ ಗಂಧರ್ವನೊಬ್ಬನು ಭೂಲೋಕದ ವಿಚಿತ್ರಗಳನ್ನು ನೋಡುತ್ತಾ ಆಕಾಶದಲ್ಲಿ ತಿರುಗುತ್ತಿದ್ದನು. ಆಗ ಒಂದು ಅರಣ್ಯ ಪ್ರಾಂತದಲ್ಲಿ ಒಬ್ಬ ಮನುಷ್ಯನು ಅಲೆದಾಡಿ

ಬೇತಾಳಕಥೆಗಳು?..



ಕೊಂಡಿರುವುದನ್ನು ನೋಡಿದನು. ತುಂಬಾ ಸೊರಗಿ ಹೋಗಿದ್ದ ಆ ಮನುಷ್ಯನು ಹರಕು ಬಟ್ಟೆಗಳನ್ನು ಉಟ್ಟುಕೊಂಡಿದ್ದನು. ಹೊಟ್ಟೆಗೆ ಗತಿಯಿಲ್ಲದಂತಿರುವ ಅವನು ಮರಗಳಿಂದ ಬಿದ್ದ ಎಂಥದೋ ಹಣ್ಣು ಗಳನ್ನು ಹೆಕ್ಕಿ ತಿನ್ನುವುದನ್ನು ನೋಡುವಾಗ ಪ್ರಗಲ್ಭನಿಗೆ ಬಹಳ ವಿನೋದವೆನಿಸಿತು. ನಡುನಡುವೆ ಯಾವ ಕ್ರೂರ ಮೃಗಗಳಿಂದ ಏನು ಅಪಾಯ ಬರುವುದೋ ಎಂದು ಹೆದರಿ ಬೀಳುತ್ತಿದ್ದ ಆ ಬಡ ಮನುಷ್ಯ. ಅಂತಹ ದರಿದ್ರ ಮಾನವನನ್ನು ನೋಡಿ ಗಂಧರ್ವನಿಗೆ ದಯೆ ಒಸರುವ ಮಾತು ಹಾಗಿರಲಿ, ಇಂಥವನ ಮುಂದೆ ತನ್ನ ಲೋಕದ ಮಹದೈಶ್ವರ್ಯ ಗಳ ಸಮಾಚಾರಗಳನ್ನು ಹೇಳಿದರೆ ಅವನ ಸ್ಥಿತಿ ಹೇಗಾವುದೋ ನೋಡಬೇಕೆನಿಸಿತು. ತನ್ನ ಅಪೂರ್ವ ಶಕ್ತಿಗಳನ್ನು ಪ್ರದರ್ಶಿಸಿ ವಿನೋದ ನೋಡಬೇಕೆನಿಸಿತು.

ಕೂಡಲೇ ಗಂಧರ್ವನು ಆಕಾಶದಿಂದ ಆ ದರಿದ್ರನ ಮುಂದೆ ಇಳಿದು ನಿಂತನು. ಅವನನ್ನು ನೋಡಿ ದರಿದ್ರನು ಗಾಬರಿಬಿದ್ದು, ಚೇತರಿಸಿಕೊಂಡು, "ಅಯ್ಯಾ! ನಿಮ್ಮ ರೂಪ ನೋಡಿದರೆ ಮನುಷ್ಯರ ಹಾಗೆ ಕಾಣುವುದೇ ಇಲ್ಲ. ಯಾವ ಲೋಕದವರಪ್ಪಾ ನೀವು?" ಎಂದು ಕೇಳಿದನು.

ಗಂಧರ್ವನು ಬಡವನೊಂದಿಗೆ ತಾನು ಗಂಧರ್ವ ನೆಂದು ಹೇಳಿ ಆ ಲೋಕದಲ್ಲಿ ತಾನು ಅನುಭವಿಸುವ ಸುಖ ಸೌಕರ್ಯಗಳನ್ನು ವಿವರಿಸಿ ಸ್ವಲ್ಪ ಹೊತ್ತು ಹೇಳಿ, "ನಿನ್ನ ಹೆಸರು ಏನಾದರೆ ನನಗೇನಿಲ್ಲ. ನೀನೊಬ್ಬ ಆಗರ್ಭ ದರಿದ್ರನಾದ ಮನುಷ್ಯನೆಂದು ನೋಡಿದರೇ ತಿಳಿಯುತ್ತದೆ. ಸ್ವತಃ ನನಗೆ ನಿನಗಿಂತ ಸಾವಿರಪಾಲು ಹೆಚ್ಚಿಗೆ ಅಪೂರ್ವ ಶಕ್ತಿಗಳಿವೆ. ಅದನ್ನೆಲ್ಲ ನೋಡಬೇಕೆಂದು ನಿನಗೆ ಕಾಣುವುದಿಲ್ಲ ವೇನು?" ಎಂದನು.

"ಅದೆಲ್ಲಾ ನನಗೇನು ಗೊತ್ತು? ಅಂಥಾ ಶಕ್ತಿ ಗಳಿಂದ ಏನಾಗುತ್ತದೆಂದು ನಾನೇನು ಕಂಡೆ? ಅದರಿಂದಾಗುವ ಮಹಾಕಾರ್ಯವೇನಾದರೂ ಇದೆ ಯೇನು?" ಎಂದನು ಬಡವ.

"ಮಹಾಶಕ್ತಿಗಳೆಂದರೆ ಏನೆಂಬುದೂ ಗೊತ್ತಿಲ್ಲದ ಮೂಢ ನೀನು. ನಿನಗೆ ಸ್ವಲ್ಪವಾದರೂ ತಿಳುವಳಿಕೆ ಇದ್ದರೆ ನಿನಗಿರುವ ಒಂದು ಆಶೆಯನ್ನು ಹೇಳಿ ನೋಡು. ನೀನು ಹೇಳಿದ್ದನ್ನು ನಾನು ಮಾಡಲಾಗದೆ ಹೋದರೆ ಸೋತೆನೆಂದು ಒಪ್ಪಿಕೊಂಡು ನಿನಗೆ ಸಕಲ ಸಂಪತ್ತುಗಳನ್ನೂ ಕೊಟ್ಟು ಹೋಗುತ್ತೇನೆ. ಒಂದು ವೇಳೆ ನೀನೇ ಸೋತರೆ ನಿನ್ನನ್ನು ನಾಯಿಯಾಗಿ ಮಾಡುತ್ತೇನೆ. ಒಪ್ಪುವೆಯಾ?" ಎಂದನು.

"ಮೊದಲು ನಾನು ಹೇಳಿದ ಒಂದು ಕೆಲಸ ಮಾಡಿದರೆ ಆಮೇಲೆ ಪಂಥಕ್ಕೆ ಒಪ್ಪುತ್ತೇನೆ" ಎಂದನು ಬಡವ.

"ಸರಿ ಹೇಳು ನೋಡುವಾ" ಎಂದು ಗಂಧರ್ವನು ಹೇಳಲು, ಬಡವನು ಪಕ್ಕದಲ್ಲಿದ್ದ ಒಂದು ಮರವನ್ನು ಗಂಧರ್ವನಿಗೆ ತೋರಿಸಿ, "ನಿಮ್ಮ ಅಪೂರ್ವ ಶಕ್ತಿ

ಯಿಂದ ಆ ಮರವನ್ನು ಆನೆ ಮಾಡಿರಿ, ನೋಡುವಾ" ಎಂದನು, ಏನೂ ತೋರದೆ ಬಾಯಿಗೆ ಬಂದ ಹಾಗೆ. ಕೂಡಲೇ ಗಂಧರ್ವನು ಮರದ ಕಡೆಗೆ ಕೈಯಾಡಿ ಸುತ್ತಾ, ಏನೋ ಹೇಳಿದನು. ಮರುಕ್ಷಣದಲ್ಲಿ ಮರವು ಆನೆಯಾಗಿ ಮಾರ್ಪಟ್ಟು, ಘೀಂಕರಿಸುತ್ತಾ ಅಲ್ಲಿಂದ ಓಡಿ ಹೋಯಿತು.

"ನಿಮ್ಮ ಶಕ್ತಿ ಅಪೂರ್ವವೇ ಸರಿ. ಈಗ ಪಂದ್ಯಕ್ಕೆ ಒಪ್ಪುತ್ತೇನೆ. ನನ್ನ ಮನೆಗೆ ಬನ್ನಿ" ಎಂದು ಗಂಧರ್ವನನ್ನು ತನ್ನ ಮನೆಗೆ ಕರೆದೊಯ್ದನು.

ಅವನ ಮನೆಯೊಂದು ಸಣ್ಣ ಗುಡಿಸಲಾಗಿತ್ತು. ಬಡವನು ಆ ಗುಡಿಸಲನ್ನು ಅಂದವಾದ ಭವನವನ್ನಾಗಿ ಮಾಡಲು ಗಂಧರ್ವನನ್ನು ಕೇಳಿಕೊಂಡನು. ಗಂಧರ್ವನು ಕ್ಷಣ ಮಾತ್ರದಲ್ಲಿ ಅದನ್ನು ಮಹಾ ಭವನವಾಗಿ ಮಾಡಿದನು.

ಆಮೇಲೆ ಬಡವನು ತನ್ನ ಕುಂಟು ತಮ್ಮನನ್ನು ಗಂಧರ್ವನಿಗೆ ತೋರಿಸಿ, ಅವನ ಕಾಲುಗಳು ಸರಿಯಾಗುವಂತೆ ಮಾಡಲು ಹೇಳಿದನು. ಗಂಧರ್ವನ ಶಕ್ತಿಯಿಂದ ತಮ್ಮನ ಕುಂಟು ಕಾಲು ಸರಿಯಾಯಿತು. ಅದನ್ನು ನೋಡಿ ಬಡವನು ತಮ್ಮನ ಭುಜವನ್ನು ಆಪ್ಯಾಯಮಾನವಾಗಿ ತಟ್ಟುತ್ತಾ ಗಟ್ಟಿಯಾಗಿ ನಕ್ಕನು.

ಆ ನಗುವನ್ನು ಕೇಳಿ ಗಂಧರ್ವನು ಕೋಪಗೊಂಡು "ಏನೋ ಬಡ ಹುಂಬಾ! ಇದುವರೆಗೆ ನೀನು ಹೇಳಿದ್ದನ್ನೆಲ್ಲಾ ಮಾಡಿದೆನೋ ಇಲ್ಲವೋ? ನಿನ್ನ ರೀತಿ ನೋಡಿದರೆ ಮುಖಕ್ಕೆ ತಕ್ಕ ಮಾತಾಡಿ ನನ್ನ ಮೂಲಕ ಲಾಭ ಪಡೆದು, ನನ್ನನ್ನು ಮೂರ್ಖನೆಂಬ ಹಾಗೆ ನಗುವಿಯೇನು? ನಾನೇನೂ ಅಂಥ ಬುದ್ಧಿಗೇಡಿಯಲ್ಲ. ನೋಡಿಕೋ!" ಎಂದು ಮರುಕ್ಷಣದಲ್ಲೇ ಭವನವನ್ನು ಗುಡಿಸಲಾಗಿಯೂ, ಕುಂಟನನ್ನು ಮತ್ತೆ ಕುಂಟನಾಗಿಯೂ ಮಾಡಿಬಿಟ್ಟನು.

ಬಡವನು "ಅಯ್ಯಯ್ಯೋ!" ಎಂದು ಗೋಳು ಮೊರೆಯುವನಾದನು. ಅದನ್ನು ನೋಡಿ ಗಂಧರ್ವನು ಅತ್ಯಾನಂದದಿಂದ, "ನನ್ನ ಅಪೂರ್ವ ಶಕ್ತಿಗಳಿಂದ ನೀನು ಹೇಳಿದ ಹಾಗೆಲ್ಲಾ ಮಾಡಿಬಿಟ್ಟೆನು. ನೀನು ಸೋತು ಹೋದುದು ನಿಜವಷ್ಟೆ? ಈಗ ನಿನ್ನನ್ನು



ನಾಯಿಯಾಗಿ ಮಾರ್ಪಡಿಸಿ ನನ್ನ ಲೋಕಕ್ಕೆ ಹೋಗಿ ಬಿಡುತ್ತೇನೆ" ಎಂದನು. "ಅದು ಹೇಗಾದೀತು? ನೀವು ಮಾಡಿದ್ದು ಯಾವುದೂ ಇಲ್ಲವೇ ಇಲ್ಲ. ಯಾರು ನಂಬು ತ್ತಾರೆ? ಸುಮ್ಮನೇ ವಾದವೇಕೆ? ಈಗ ನಾನು ಹೇಳುವ ಒಂದೇ ಒಂದು ಕೆಲಸ ನೀವು ಮಾಡಿ ಅದನ್ನು ಉಳಿಸಿದರೆ ಸರಿ. ನಾನು ಸೋತೆನೆಂದು ಒಪ್ಪುತ್ತೇನೆ. ಇಲ್ಲದಿದ್ದರೆ ನೀವು ಸೋಲಬೇಕು" ಎಂದನು ಬಡವ.

"ಸರಿ. ಆ ಕೆಲಸವೇನೆಂದು ಬೇಗನೆ ಹೇಳಿಬಿಡು" ಎಂದನು ಗಂಧರ್ವ.

"ಮತ್ತೇನಿಲ್ಲ. ನಿಮ್ಮ ಅಪೂರ್ವ ಶಕ್ತಿಗಳನ್ನು ಉಪಯೋಗಿಸಿ, ನಾನು ನೀವಾಗುವಂತೆಯೂ ನೀವು ನಾನಾಗುವಂತೆಯೂ ಮಾಡಿಬಿಡಿ" ಎಂದನು ಬಡವ.

ಪ್ರಗಲ್ಭ ಗಂಧರ್ವನು ಒಂದೆರಡು ಕ್ಷಣಗಳ ವರೆಗೆ ಆಲೋಚಿಸಿ, ನಡುಗುವ ಸ್ವರದಿಂದ, "ನಾನು ಸೋತುಹೋದೆನು" ಎಂದು ಹೇಳಿ ಬಡವನ ಗುಡಿಸಲನ್ನು ದೊಡ್ಡ ಭವನವನ್ನಾಗಿ ಮಾರ್ಪಡಿಸಿ ಅವನ ತಮ್ಮನ ಕುಂಟುತನವನ್ನು ಹೋಗಲಾಡಿಸಿ ಮಾತಾಡದೆ ತನ್ನ ಲೋಕಕ್ಕೆ ಹೋದನು.

ಬೇತಾಳವು ಇಲ್ಲಿಯವರೆಗೆ ಕಥೆ ಹೇಳಿ, "ಎಲೈ ಮಹಾರಾಜಾ! ನನಗೆ ಒಂದೇ ಒಂದು ಸಂದೇಹ. ಅಷ್ಟೊಂದು ಅಪೂರ್ವ ಶಕ್ತಿಗಳಿರುವ ಗಂಧರ್ವನು ಬಡವನ ಕೊನೆಯ ಕೋರಿಕೆಗೆ ಹಾಗೇಕೆ ಹೆದರ ಬೇಕಿತ್ತು? ಅದೇಕೆ ತಾನು ಸೋತು ಹೋದುದಾಗಿ ಒಪ್ಪಿಕೊಂಡ? ಇದಕ್ಕೆ ತಕ್ಕ ಉತ್ತರ ಗೊತ್ತಿದ್ದೂ ಹೇಳದೆ ಹೋದರೆ ನೀನು ತಲೆಯೊಡೆದು ಸಾಯುವಿ!" ಎಂದಿತು. ಅದಕ್ಕೆ ತ್ರಿವಿಕ್ರಮನು ಹೀಗೆಂದನು:

"ಅಪೂರ್ವ ಶಕ್ತಿಗಳಿರುವ ಗಂಧರ್ವನು, ಬಡವನ ಮುಂದೆ ಸೋತು ಓಡಿ ಹೋಗಲಿಕ್ಕೆ ಕಾರಣವು ಆ ಬಡವನ ಬುದ್ಧಿ ಬಲವೇ. ಗಂಧರ್ವನಲ್ಲಿಯೂ ಬುದ್ಧಿ ಬಲವು ಕಡಿಮೆಯಾಗೇನೂ ಇರಲಿಲ್ಲ. ಆದರೆ ಅಹಂಕಾರ ಅಳತೆ ಮೀರಿಕೊಂಡಿತ್ತು. ದಟ್ಟ ದರಿದ್ರನಾಗಿರುವ ಮನುಷ್ಯನು ಮೂಢನೆಂದು ಲೆಕ್ಕ ಹಾಕಿದನು. ಬಡವನ ಕೊನೆಯ ಕೋರಿಕೆಯೇ ಗಂಧರ್ವನ ಅಹಂಕಾರಕ್ಕೆ ಪೆಟ್ಟಾಗಿ ಬಿದ್ದು ಆಲೋಚಿಸುವಂತೆ ಮಾಡಿತು. ಬಡವನ ಕೋರಿಕೆಯುನ್ನು ನೆರವೇರಿಸುವುದೆಂದರೆ, ತನ್ನ ಮಹಿಮೆಗಳನ್ನೆಲ್ಲಾ ಅವನಿಗೆ ಕೊಟ್ಟ ಹಾಗಾಗುತ್ತದೆ. ಆಗ ಅವನು ತನ್ನನ್ನೇ ನಾಯಿಯಾಗಿ ಮಾಡಬಲ್ಲನು. ಇದನ್ನು ಅರ್ಥ ಮಾಡಿಕೊಂಡ ಗಂಧರ್ವನು ದರಿದ್ರನಿಗೆ ಸಂಪತ್ತುಗಳನ್ನು ಕೊಟ್ಟು ಮಾತಾಡದೆ ಹೊರಟು ಹೋಗಿದ್ದಾನೆ. ಅವನಿಗೆ ದೊಡ್ಡ ಅವಮಾನವಾಯಿತು."

ರಾಜನಿಗೆ ಹೀಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆಗೆ ಸೇರಿ ನೇತಾಡತೊಡಗಿತು.



# ರಕ್ಷಣೆ

**ರಾ**ಮರಾಯನು ಪಟ್ಟಣದಲ್ಲಿ ಚಿಕ್ಕದೊಂದು ಉದ್ಯೋಗಮಾಡಿಕೊಂಡಿದ್ದನು. ಅವನ ಮನೆಯಲ್ಲಿ ಅವನ ಹೆಂಡತಿಯೂ, ಮಗಳೂ ಮಾತ್ರವಲ್ಲದೆ ತಮ್ಮನ ಮಗಳು ಕೂಡಾ ಇದ್ದಳು. ತಮ್ಮನ ಹೆಂಡತಿ ಸತ್ತು ಹೋಗಿದ್ದುದರಿಂದ, ಮಗಳ ಲಾಲನೆ ಪಾಲನೆ ಮಾಡುವಂಥ ಹೆಂಗಸರು ಇಲ್ಲದ್ದರಿಂದ ರಾಮರಾಯನು ತಮ್ಮನ ಮಗಳನ್ನು ತನ್ನ ಮನೆಗೆ ಕರೆದು ತಂದಿದ್ದನು.

ರಾಮರಾಯನ ಹೆಂಡತಿ ಬಾವ ಮೈದುನನ ಮಗಳನ್ನು ತನ್ನ ಮಗಳ ಹಾಗೆಯೇ ಭೇದ ಭಾವ ತೋರದೆ ಚೆನ್ನಾಗಿ ನೋಡಿಕೊಳ್ಳುತ್ತಿದ್ದಳು.

ಹಬ್ಬದ ದಿನಗಳಲ್ಲಿ ಜವುಳಿ ಅಂಗಡಿಗೆ ಹೋದಾಗ ರಾಮರಾಯನು ತನ್ನ ಮಗಳಿಗೆ ಬೆಲೆಬಾಳುವ ಬಟ್ಟೆಗಳನ್ನೂ, ತಮ್ಮನ ಮಗಳಿಗೆ ಅಗ್ಗದ ಬಟ್ಟೆಗಳನ್ನೂ ಆರಿಸಿಕೊಂಡನು. ಆಗ ಹೆಂಡತಿ ಅವನನ್ನು ಜರಿದು ಒಂದೇ ಬಗೆಯ ಬಟ್ಟೆಗಳನ್ನೇ ಕೊಂಡುಕೊಂಡಳು.

ನಾಲ್ಕು ವರ್ಷಗಳವರೆಗೆ ಹಾಗೆ ನಡೆಯಿತು. ಆಮೇಲೆ ರಾಮರಾಯನು ಹಬ್ಬಕ್ಕೆ ತಮ್ಮನ ಮಗಳಿಗೆ ಅಗ್ಗದ ಬಟ್ಟೆ ಕೊಂಡುಕೊಂಡಾಗ ಹೆಂಡತಿ ಅಭ್ಯಂತರ ಮಾಡುವುದನ್ನು ಬಿಟ್ಟಳು. ಕ್ರಮವಾಗಿ ತನ್ನ ಮಗಳಿಗೆ ಒಳ್ಳೆಯ ಊಟ ತಿಂಡಿಗಳನ್ನು ಕೊಡುತ್ತ, ಮೈದುನನ ಮಗಳಿಗೆ ಉಳಿದ ಅನ್ನವನ್ನೂ, ನೀರು ಬೆರೆಸಿದ ಮೇಲೋಗರಗಳನ್ನೂ ಬಡಿಸುತ್ತಿದ್ದಳು.

ಒಂದು ದಿನ ರಾಮರಾಯನು ತಮ್ಮನ ಮಗಳನ್ನು, ಪಕ್ಕದ ಗ್ರಾಮದಲ್ಲಿರುವ ತಮ್ಮನ ಬಳಿಗೇ ಕರೆದೊಯ್ದು: "ನಿನ್ನ ಅತ್ತಿಗೆ ನಾಲ್ಕೈದು ತಿಂಗಳ ಕೆಳಗಿನವರೆಗೂ ನಿನ್ನ ಮಗಳನ್ನು ಪ್ರೇಮದಿಂದ ನೋಡಿಕೊಂಡಳು. ಅವಳನ್ನು ಪರೀಕ್ಷಿಸಲಿಕ್ಕಾಗಿ ಹಬ್ಬದ ಕಾಲದಲ್ಲಿ ನಿನ್ನ ಮಗಳಿಗೆ ಅಗ್ಗದ ಬಟ್ಟೆ ಕೊಂಡುಕೊಂಡರೆ, ಅವಳು ನನ್ನನ್ನು ಬೈದು ಒಳ್ಳೆಯ ಬಟ್ಟೆ ಕೊಂಡುಕೊಳ್ಳುತ್ತಿದ್ದಳು. ಈಗ ಅವಳೇ ನಿನ್ನ ಮಗಳಿಗೆ ಅಗ್ಗದ ವಸ್ತ್ರ ಕೊಂಡುಕೊಳ್ಳುತ್ತಾಳೆ. ಇನ್ನೂ ಹೀಗೆ ಇದ್ದರೆ ನಿನ್ನ ಮಗಳನ್ನು ನಾಯಿಗೂ ಕಡೆಮಾಡಿಯಾಳು. ಇನ್ನು ಮೇಲೆ ನಿನ್ನ ಮಗಳ ರಕ್ಷಣೆಯ ಭಾರ ನಿನ್ನದೇ" ಎಂದನು.





# ಅಪವಾದ

ಹಿಂದಿನ ಕಾಲದಲ್ಲಿ ಶಾಮಾಪುರವೆಂಬ ಊರು ನಾಲ್ಕಾರು ಗ್ರಾಮಗಳ ಕೇಂದ್ರ ಪ್ರದೇಶದಲ್ಲಿದ್ದಿತು. ಸುತ್ತುಮುತ್ತಿನ ಗ್ರಾಮಗಳವರಿಗೆ ಅದು ಹತ್ತಿರ ವಾಗಿದ್ದಿತು. ಈ ಕಾರಣದಿಂದ ಕಾಶಿಯಲ್ಲಿ ವೈದ್ಯ ವಿದ್ಯೆಯನ್ನು ಅಭ್ಯಾಸಮಾಡಿ ತೇರ್ಗಡೆ ಹೊಂದಿದ ಶೇಷಾದ್ರಿ ಎಂಬ ಯುವಕನು ತನ್ನ ವೈದ್ಯಕೀಯ ಜೀವನಕ್ಕೆ ಶಾಮಾಪುರವನ್ನೇ ಆರಿಸಿಕೊಂಡನು. ಅವನು ತನ್ನ ಹೆಂಡತಿಯೊಂದಿಗೆ ಅಲ್ಲಿಗೆ ಬಂದು, "ವೈದ್ಯ ಶೇಷಾದ್ರಿ" ಎಂಬ ತನ್ನ ಹೆಸರು ಎಲ್ಲರಿಗೂ ತಿಳಿಯುವಂತೆ ಪ್ರಕಟ ಪಡಿಸಿದನು.

ಒಂದು ದಿನ ಗ್ರಾಮಸ್ಥರು ಮರದಿಂದ ಕೆಳಗೆಬಿದ್ದ ಹುಡುಗನೊಬ್ಬನನ್ನು ವೈದ್ಯ ಶೇಷಾದ್ರಿಯ ಬಳಿಗೆ ಎತ್ತಿಕೊಂಡು ಬಂದರು. ಅವನಿಗೆ ಭಾರಿ ಪೆಟ್ಟುಗಳಾಗಿದ್ದುವು. ವಿಪರೀತ ರಕ್ತ ಸ್ರಾವವಾಗಿ ಹೋಗಿತ್ತು. ಶೇಷಾದ್ರಿ ಎಷ್ಟು ಪ್ರಯತ್ನಿಸಿದರೂ ಅವನ ಪ್ರಾಣವನ್ನು ಕಾಪಾಡಲಾಗದೆ ಹೋದನು.

ಮತ್ತೆ ನಾಲ್ಕು ದಿನಗಳ ಮೇಲೆ ಒಬ್ಬ ವೃದ್ಧನಿಗೆ ಹಠಾತ್ತಾಗಿ ಧನುರ್ವಾತವು ಕೆರಳಿ ಬೋದವಿಲ್ಲದೆ ಬಿದ್ದನು. ಬಂಧುಗಳು ಅವನನ್ನು ಶೇಷಾದ್ರಿಯ ಬಳಿಗೆ ಹೊತ್ತುಕೊಂಡು ತಂದರು. ಶೇಷಾದ್ರಿ ಎಷ್ಟು ಒಳ್ಳೆಯ ಔಷಧಿಗಳನ್ನು ಉಪಯೋಗಿಸಿದರೂ ಪ್ರಯೋಜನವಾಗದೆ ಎರಡು ದಿನಗಳ ಮೇಲೆ ಆ ವೃದ್ಧನು ತೀರಿಹೋದನು.

ಇಂತಹದೇ ಮತ್ತೊಬ್ಬ ಯುವಕನ ವಿಷಯದಲ್ಲಿ ಕೂಡಾ ನಡೆಯಿತು. ಶೇಷಾದ್ರಿ ಬಂದು ವೈದ್ಯ ವೃತ್ತಿ ಪ್ರಾರಂಭಿಸಿದ ಒಂದು ತಿಂಗಳೊಳಗೆ, ಅವನ ಹತ್ತಿರ ಚಿಕಿತ್ಸೆಗೆ ಬಂದ ಮೂವರು ಈ ವಿಧವಾಗಿ ಸತ್ತು ಹೋಗುವಂತಾದುದರಿಂದ ಗ್ರಾಮಸ್ಥರು "ಶೇಷಾದ್ರಿ ಮಾತ್ರೆ, ವೈಕುಂಠಯಾತ್ರೆ" ಎಂದು ಹೇಳ ತೊಡಗಿದರು. ಅವನ ಬಳಿಗೆ ಚಿಕಿತ್ಸೆಗೆ ಬರಲು ಎಲ್ಲರೂ ಹೆದರ ತೊಡಗಿದರು.

ಪ್ರಾರಂಭದಶೆಯಲ್ಲಿಯೇ ಈ ವಿಪರೀತಗಳಾದುದರಿಂದ ಇನ್ನು ತನ್ನ ಬಳಿಗೆ ವೈದ್ಯ ಮಾಡಿಸಿಕೊಳ್ಳಲು ಯಾವ ರೋಗಿಗಳೂ ಬರಲಾರರೆಂದು ಶೇಷಾದ್ರಿಗೆ ಗೊತ್ತಾಯಿತು. ತಾನು ಇನ್ನು ಬೇರೆ ಊರಿಗೆ ಹೋಗುವುದೇ ಒಳ್ಳೆಯದೆಂದು ತೋರಿತು.

ಹಾಗೆ ಅವನು ಆ ಊರು ಬಿಡುವ ಪ್ರಯತ್ನದಲ್ಲಿರುವಾಗ, ಅವನಿರುವ ಬೀದಿಯ ಮೂರನೇ

ಆರ್. ಎಸ್. ನಾರಾಯಣಮೂರ್ತಿ

ಮನೆಯಲ್ಲಿ ಶಾಂತಮ್ಮನಿಗೆ ಆಕಸ್ಮಿಕವಾಗಿ ವಿಪರೀತ ವಾದ ಹೊಟ್ಟೇ ನೋವು ಪ್ರಾರಂಭವಾಯಿತು.

ಶೇಷಾದ್ರಿಯ ವೈದ್ಯದಲ್ಲಿ ನಂಬುಗೆ ಕಳೆದುಕೊಂಡ ಅವಳ ಗಂಡ ಗುರುನಾಥನು ಗ್ರಾಮದಲ್ಲಿ ತನಗೆ ತಿಳಿದಿದ್ದ ಒಬ್ಬ ಅಣಲೇಕಾಯಿ ವೈದ್ಯನನ್ನು ಕರೆದು ತಂದನು. ಅವನು ಕೊಟ್ಟ ಮಾತ್ರೆಗಳು ಏನೂ ಉಪಯೋಗವಾಗಲಿಲ್ಲ.

ಶಾಂತಮ್ಮನ ಹೊಟ್ಟೇ ನೋವು ಜೋರು ಜೋರೇ ಆಯಿತು. "ಅಯ್ಯೋ ! ತಾಳಲಾರೆನಪ್ಪಾ ! ಶೇಷಾದ್ರೀನಾದರೂ ಕರಕೊಂಡು ಬನ್ರೀ. ಯಾವ ಹುತ್ತಿನಲ್ಲಿ ಯಾವ ಹಾವೋ ! ಹಾಯ್ಯೋ! " ಎಂದು ನರಳ ತೊಡಗಿದಳು.

ಅವಳ ನರಳಾಟ ಹೊರಳಾಟ ನೋಡಿ ಗುರುನಾಥನು ಗಾಬರಿಬಿದ್ದು ನಗರಕ್ಕಾದರೂ ಹೋಗಿ ದೊಡ್ಡ ವೈದ್ಯನನ್ನು ಕರೆದು ತರಲು ತವಕಿಸಿದನು. ಆದರೆ ಹೆಂಡತಿಯ ಅವಸರದ ಚೀರಾಟ ವನ್ನು ತಾಳಲಾಗದೆ ಹೆದರುತ್ತಾ ಶೇಷಾದ್ರಿಯನ್ನೇ ಓಡಿ ಹೋಗಿ ಕರೆದುಕೊಂಡು ಬಂದನು. ಶೇಷಾದ್ರಿ ಪರೀಕ್ಷಿಸಿ ಅವಳಿಗೆ ಏನೋ ಮಾತ್ರೆಗಳನ್ನು ನುಂಗಿಸಿದನು. ಕೆಲವೇ ನಿಮಿಷಗಳಲ್ಲಿ ಶಾಂತಮ್ಮನ ಹೊಟ್ಟೇ ನೋವು ಮಂತ್ರಿಸಿದಂತೆ ಮಾಯವಾಯಿತು. ಗುರುನಾಥನಿಗಾದ ಆನಂದವು ಎಷ್ಟೆಂದು ಹೇಳಲು ಸಾಧ್ಯವಿಲ್ಲ. ಜನರ ದೃಷ್ಟಿಯ ಪ್ರಕಾಶವು ಶೇಷಾದ್ರಿಯ ಮೇಲೆ ಸ್ವಲ್ಪ ಮಟ್ಟಿಗೆ ಬಿದ್ದಿತು.

ಮಾರಣೇ ದಿನ ಕುಲಕರ್ಣಿಯ ಮಗ ಶೀನಪ್ಪನು ಇದ್ದಕ್ಕಿದ್ದ ಹಾಗೆ ಬಿದ್ದು ಕೈ ಕಾಲುಗಳನ್ನು ಪಟಪಟ ಹೊಡೆದುಕೊಳ್ಳ ತೊಡಗಿದನು. ಅಣಲೇಕಾಯಿ ವೈದ್ಯನಿಂದ ಏನೂ ಮಾಡಲಾಗದೆ ಹೋಗಲು ಶೀನಪ್ಪನ ಒತ್ತಾಯದಿಂದ ಕುಲಕರ್ಣಿಯವರು ಬೇರೆದಾರಿ ಕಾಣದೆ ಶೇಷಾದ್ರಿಯನ್ನು ಕರೆಯಿಸಿದರು.

ಶೇಷಾದ್ರಿ ಶೀನಪ್ಪನಿಗೆ ಏನೋ ಮಾತ್ರೆಗಳನ್ನು ನುಂಗಲು ಕೊಟ್ಟು. ಕೈ ಕಾಲುಗಳಿಗೆ ಒಂದು ತೈಲ ವನ್ನು ಪೂಸಿ ಮರ್ದನ ಮಾಡಿಸಿದನು. ಕೈ ಕಾಲು ಹೊಡೆದು ಕೊಳ್ಳುವುದು ನಿಂತು ಹೋಯಿತು.



ಮೂರು ದಿನಗಳಲ್ಲಿ ಅವನು ಎಂದಿನಂತೆ ಆರೋಗ್ಯವಂತನಾದನು. ಕುಲಕರ್ಣಿಯವರು ಸಂತೋಷಪಟ್ಟು ಶೇಷಾದ್ರಿಯ ಮನೆಗೆ ಒಂದು ಚೀಲ ಅಕ್ಕಿಕೊಟ್ಟು ಕಳಿಸಿದರು. ಆದರಮೇಲೆ ಸ್ವಲ್ಪ ಹಣವನ್ನೂ ಕೊಟ್ಟರು.

ಆಮೇಲೆ ಕ್ರಮವಾಗಿ ಶೇಷಾದ್ರಿಗೆ ಆ ಊರಿನಲ್ಲಿ ಪ್ರಯೋಜನವು ಬರಲು ತೊಡಗಿತು. ದೊಡ್ಡ ದೊಡ್ಡವರ ವಿಶ್ವಾಸಕ್ಕೆ ಪಾತ್ರನಾದನು. ಒಳ್ಳೆಯ ವೈದ್ಯನೆಂದು ಎಲ್ಲರೂ ಹೇಳಿಕೊಳ್ಳ ತೊಡಗಿದರು.

ಅವನ ಬಳಿಗೆ ರೋಗಿಗಳು ಧೈರ್ಯದಿಂದಲೂ ವಿಶ್ವಾಸದಿಂದಲೂ ಬರತೊಡಗಿದರು. ಅವರಿಗೆ ತಕ್ಕ ಚಿಕಿತ್ಸೆ ಮಾಡುತ್ತ ರೋಗಗಳನ್ನು ಗುಣಪಡಿಸುತ್ತ, ಅವರು ಕೊಡುವ ಸಂಭಾವನೆಗಳನ್ನು ಸ್ವೀಕರಿಸುತ್ತ ಒಳ್ಳೆಯ ಹೆಸರನ್ನೂ ಸಂಪಾದನೆಯನ್ನೂ ಗಳಿಸ ತೊಡಗಿದನು. ಆ ಗ್ರಾಮಗಳಲ್ಲಿ ಮಾತ್ರವಲ್ಲ, ಸುತ್ತುಮುತ್ತಲಿನ ಗ್ರಾಮಗಳಿಗೂ ಅವನ ಹೆಸರು ಹರಡುತಿತ್ತು. ಹೀಗಾಗಲು ಗುರುನಾಥನ ಹೆಂಡತಿ ಶಾಂತಮ್ಮನೂ, ಕುಲಕರ್ಣಿಯ ಮಗ ಶೀನಪ್ಪನೂ ಕಾರಣವಾಗಿದ್ದರು. ಅವರಿಬ್ಬರೂ ಶೇಷಾದ್ರಿಯಂತಹ ವೈದ್ಯಶಾಸ್ತ್ರ ಕಲಿತ ಪಂಡಿತ ವೈದ್ಯನನ್ನು ತಮ್ಮ ಊರಿನಲ್ಲಿ ಉಳಿಸಿಕೊಳ್ಳಬೇಕೆಂತಲೇ ಆಡಿಕೊಂಡ ಒಂದು ನಾಟಕವಾಗಿತ್ತು. ಇದು ಅವರಿಬ್ಬರ ಹೊರತು ಬೇರೆಯಾರಿಗೂ ತಿಳಿಯದು.

ಮೊದಲು ಸತ್ತು ಹೋದ ಮೂವರೂ ಪರಿಸ್ಥಿತಿ ಪೂರ್ತಿ ವಿಷಮಿಸಿದ ಮೇಲೆಯೇ ಶೇಷಾದ್ರಿಯ ಬಳಿಗೆ ತರಲ್ಪಟ್ಟವರು. ಅದನ್ನು ಯೋಚನೆ ಮಾಡದೆ ಮೂಢವಿಶ್ವಾಸಿಗಳಾದ ಗ್ರಾಮಸ್ಥರು ವೈದ್ಯದ ಸೂಕ್ಷ್ಮಗಳೇನೂ ಅವನಿಗೆ ತಿಳಿಯದೆಂದು ಒಮ್ಮೆಗೇ ಹೇಳಿಕೊಂಡು ಬಿಟ್ಟರು.

ಶಾಂತಮ್ಮನು ಶೀನಪ್ಪನ ಚಿಕ್ಕಮ್ಮನ ಮಗಳು. ಅವರಿಬ್ಬರೂ ಚಿಕ್ಕತನದಲ್ಲಿ ಒಬ್ಬ ಬಂಧುವಿನ ಹತ್ತಿರ 'ಗಳಪಟ್ಟು' ಅಭ್ಯಾಸ ಮಾಡಿಕೊಂಡಿದ್ದರು. ಗಳಪಟ್ಟು ಅಂದರೆ, ಬಾಯಿಯಲ್ಲಿ ಹಾಕಿಕೊಂಡುದನ್ನು ನುಂಗದೆ ಕುತ್ತಿಗೆಯೊಳಗೇ ಇಟ್ಟುಕೊಂಡು ಆಮೇಲೆ ಬಾಯಿಗೆ ತರುವುದು.

ಈ ವಿದ್ಯೆಯನ್ನು ಪ್ರಯೋಗಿಸಿ ಶಾಂತಮ್ಮನು ಇಲ್ಲದ ಹೊಟ್ಟೇನೊವನ್ನು ನಟಿಸಿ ಊರ ವೈದ್ಯರು ಕೊಟ್ಟ ಮಾತ್ರೆಗಳನ್ನು ನುಂಗದೆ, ಆಮೇಲೆ ಉಗುಳಿಕೊಂಡಳು. ಶೀನಪ್ಪನೂ ಕೈ ಕಾಲು ಹೊಡೆದುಕೊಂಡು ಅಂತಹ ನಟನೆಯನ್ನೇ ಮಾಡಿದ್ದನು.

ಈ ವಿಧವಾಗಿ ಮೂಢವಿಶ್ವಾಸಗಳಿಲ್ಲದ ಶೀನಪ್ಪನು ಶಾಂತಮ್ಮನೊಂದಿಗೆ ಮಾತಾಡಿ, ಅವಳನ್ನೂ ಸಹಾಯಕ್ಕೆ ಇಟ್ಟುಕೊಂಡು, ವೈದ್ಯಶಾಸ್ತ್ರವನ್ನು ಚೆನ್ನಾಗಿ ಕಲಿತ ಪಂಡಿತನೊಬ್ಬನು ತಮ್ಮ ಗ್ರಾಮವನ್ನು ಬಿಟ್ಟು ಹೋಗದಂತೆ ನೋಡಿಕೊಂಡನು.





# ಗಂಗಯ್ಯನ ಭಕ್ತಿ

ಒಂದಾನೊಂದು ಹಳ್ಳಿಯೂರಿನಲ್ಲಿ ಗಂಗಯ್ಯನೆಂಬ ಗಾರುಡೀಗಾರನಿದ್ದನು. ಅವನು ಪ್ರತಿ ವರ್ಷವೂ ಒಂದೊಂದು ಬೇರೆ ಬೇರೆ ಊರುಗಳಿಗೆ ಹೋಗಿ, ಸಂತೆಕಟ್ಟೆ, ಮೈದಾನ, ಮೊದಲಾದ ಹತ್ತು ಮಂದಿ ಕೂಡುವಲ್ಲಿ ನಿಂತು, ದೊಡ್ಡ ಕಂಠದಿಂದ ಚಮತ್ಕಾರವಾಗಿ ಮಾತಾಡುತ್ತ ಗುಂಪು ಸೇರಿಸುವನು. ಹುಡುಗರೂ ಮುದುಕರೂ ಅವನ ಸುತ್ತಲೂ ಕೂಡಿ ಕುತೂಹಲದಿಂದ ನೋಡುವರು.

ಅವರ ಮುಂದೆ ಗಂಗಯ್ಯ, ತಾನು ಗುರುವಿನಿಂದ ಕಲಿತ ಅದ್ಭುತವಾದ ಗಾರುಡೀ ವಿದ್ಯೆಗಳನ್ನು ಚೆಂದಾಗಿ ತೋರಿಸುವನು. ನೆಲದಲ್ಲಿ ಅನೇಕ ಬಗೆಯ ವಿಚಿತ್ರವಾದ ರಂಗೋಲೆಗಳನ್ನು ಹಾಕಿ, ಅದರಲ್ಲಿ ಬಣ್ಣ ಬಣ್ಣದ ಚೆಂಡುಗಳು ತನ್ನಂತೆ ಆಡುವಂತೆ ಮಾಡುವನು. ಕತ್ತಿಗಳೂ ಗಾಳಿಯಲ್ಲಿ ತಿರುಗುತ್ತ ಒಂದರೊಡನೊಂದು ಹೊಡೆದಾಡಿಕೊಳ್ಳುತ್ತಿದ್ದುವು. ಇವೇ ಮೊದಲಾದ ಚಮತ್ಕಾರಗಳನ್ನು ನೋಡಿದ ಆನಂದಿತರಾದ ಪ್ರೇಕ್ಷಕರು ತಮಗೆ ತೋರಿದುದನ್ನು ಅವನಿಗೆ ನೀಡುವರು. ಅಲ್ಲಿಂದ ಗಂಗಯ್ಯ ಇನ್ನೊಂದು ಊರಿಗೆ ಹೋಗುವನು. ಗಾರುಡೀ ವಿದ್ಯೆಗಳಲ್ಲಿ ಗಂಗಯ್ಯನನ್ನು ಮೀರಿಸುವವರು ಯಾರೂ ಇಲ್ಲವೆಂದು ಜನರು ಮಾತಾಡಿಕೊಳ್ಳುತ್ತಿದ್ದರು. ಆದರೆ ಅವನ ಸಂಪಾದನೆ ಮಾತ್ರ ಆಯಾದಿನದ ಊಟ ತಿಂಡಿಗಳಿಗೂ ಸಾಲುವಷ್ಟು ಇರಲಿಲ್ಲ. ಯಾವಾಗಲೂ ಅವನು ಬಡತನದ ಸ್ಥಿತಿಯಲ್ಲೇ ಇರುವನು.

"ನನ್ನ ಈ ಬಗೆಯ ಜೀವನ ಕ್ರಮದಲ್ಲಿ ಇಹಲೋಕದ ಸುಖವೇನಿಲ್ಲವೆಂದು ನನಗೇನೂ ಚಿಂತೆಯಿಲ್ಲ. ದೇವಿಯ ಅನುಗ್ರಹದಿಂದ ಸತ್ತ ಮೇಲೆ ಪರಲೋಕದಲ್ಲಿ ಸುಖ ದೊರಕಿದರೆ ಅಷ್ಟೇ ಸಾಕು ನನಗೆ. ನಾನು ಯಾರಿಗೂ ಅನ್ಯಾಯ ಮಾಡಿಲ್ಲವಾದುದರಿಂದ ಪರಲೋಕ ಸುಖವಿದ್ದೇ ಇರುತ್ತೆ" ಎಂದು ಗಟ್ಟಿಯಾಗಿ ನಂಬಿಕೊಂಡಿದ್ದನು ಗಂಗಯ್ಯ.

ಗಂಗಯ್ಯ ಹುಟ್ಟಿ ಬೆಳೆದ ಗ್ರಾಮದಲ್ಲಿ ಒಂದು ದೇವಿಯ ಆಲಯವಿದ್ದಿತು. ಆ ಮಹಾದೇವಿ ತುಂಬಾ ಮಹಿಮೆಯುಳ್ಳವಳೆಂದು ಗ್ರಾಮಸ್ಥರು ಗಟ್ಟಿಯಾಗಿ ನಂಬುತ್ತಿದ್ದರು. ನವರಾತ್ರಿಯ ಸಮಯದಲ್ಲಿ ಎಲ್ಲರೂ ಆ ದೇವಾಲಯಕ್ಕೆ ಬಂದು ಬಹು ವೈಭವದಲ್ಲಿ

**೩೫ ವರ್ಷಗಳ ಹಿಂದಿನ ಚಂದಮಾಮ ಕಥೆ**

ದೇವಿಯ ಉತ್ಸವ ನಡೆಸುವರು. ಅದಕ್ಕಾಗಿ ಎಲ್ಲರೂ ಬೆಟ್ಟುಗೈಯಿಂದ ಧನವನ್ನು ಖರ್ಚು ಮಾಡುವರು.

ವರ್ಷವಿಡೀ ಎಲ್ಲೆಲ್ಲೋ ತಿರುಗಾಡಿಕೊಂಡಿರುವ ಗಂಗಯ್ಯ ನವರಾತ್ರಿಯ ಉತ್ಸವ ಕಾಲದಲ್ಲಿ ತನ್ನ ಸ್ವಂತ ಊರಿಗೆ ಬಂದು ಬಿಡುತ್ತಿದ್ದನು. ದೇವಿಯ ಉತ್ಸವವನ್ನು ಕಣ್ದಣಿಯೆ ನೋಡುವನು.

ಹೀಗೆ ಗಂಗಯ್ಯನಿಗೆ ವಯಸ್ಸು ಏರುತ್ತಾ ಹೋಗುತ್ತಿರಲು, ಗಾರುಡಿಯಲ್ಲಿ ಅವನ ಜಾಣತನ ಹೆಚ್ಚು ಹೆಚ್ಚು ಆಗುತ್ತಿರಲು, ಅವನ ಸಂಪಾದನೆ ಮಾತ್ರ ತಗ್ಗಿಕೊಂಡೇ ಇದ್ದಿತು. ಕಾರಣವೇನೆಂದರೆ, ಸುತ್ತುಮುತ್ತಲಿನ ಗ್ರಾಮಗಳ ಜನರು ಗಂಗಯ್ಯನ ಗಾರುಡಿಯನ್ನು ನೂರಾರು ಬಾರಿ ನೋಡಿ ತೀರಿಸಿದ್ದರು. ಅವರಿಗೆ ಅದರಲ್ಲಿ ಹೊಸತನವೇನೂ ಕಾಣಲಿಲ್ಲ. ಗಂಗಯ್ಯನಿಗೆ ಪ್ರಾಯವೇರಿದಂತೆ ಅವನ ಗಾರುಡಿಯೂ ಹಳತಾಗಿ, ಗಂಗಯ್ಯನು ತೀರ ಬಡವನಾಗಿಯೇ ಇರುತ್ತಿದ್ದನು. ಇಹಲೋಕದ ಸುಖವು ತಗ್ಗುತ್ತಿದ್ದ ಹಾಗೆ ಗಂಗಯ್ಯನಿಗೆ ಪರಲೋಕದ ಮೇಲೆ ಶ್ರದ್ಧೆಯೂ ನಂಬುಗೆಯೂ ಹೆಚ್ಚತೊಡಗಿತು. ಹೆಚ್ಚಿನ ಕಾಲವನ್ನು ದೇವಿಯ ಆಲಯದಲ್ಲೇ ಕಳೆಯುತೊಡಗಿದನು.

ಒಂದು ಸಾರಿ ನವರಾತ್ರಿಯ ಕಾಲವು ಬಂದಿತು. ಊರಲ್ಲಿರುವವರೆಲ್ಲ ನವರಾತ್ರಿಯ ಉತ್ಸವ ಕಾರ್ಯಗಳಲ್ಲಿ ನಿರತರಾಗಿ ಹೋಗಿರುವಂತೆ ಕಾಣುತ್ತಿದ್ದರು. ಸಮಾರಾಧನೆಗಾಗಿ ಅಕ್ಕಿಬೇಳೆ ಕಾಳುಗಳೂ; ತರಕಾರಿಗಳೂ ಗಾಡಿಗಳಲ್ಲಿ ಬಂದು ಬೀಳುತ್ತಿದ್ದುವು. ಆಲಯದ ಸುತ್ತಲೂ ಅಲಂಕಾರದ ಚಪ್ಪರಗಳನ್ನು ಹಾಕುತ್ತಿದ್ದರು. ತೋರಣಗಳನ್ನು ಕಟ್ಟುತ್ತಿದ್ದರು.

ಆ ಕೆಲಸ ಕಾರ್ಯಗಳನ್ನು ನೋಡಿ ಗಂಗಯ್ಯನು ತನ್ಮಯನಾದನು. "ಇವರೆಲ್ಲಾ ಪುಣ್ಯವಂತರು ! ಆ ಮಹಾತಾಯಿ ಇವರನ್ನೆಲ್ಲಾ ಅತ್ಯಾದರದಿಂದ ನೋಡಿ ಚೆನ್ನಾಗಿರಿಸದೆ ಸುಮ್ಮನಿರುವಳೇ ? ಇಲ್ಲಿ ಬ್ರಾಹ್ಮಣರ ಪುಣ್ಯವನ್ನಂತೂ ಹೇಳುವುದೇ ಬೇಡ. ಅವರು ದಿವ್ಯವಾದ ಸ್ತೋತ್ರ ಮಂತ್ರಗಳನ್ನು ಪಠಿಸುತ್ತಾರೆ. ಪೂಜೆ ಮಾಡುತ್ತಾರೆ. ನೈವೇದ್ಯ ಸಮರ್ಪಿಸುತ್ತಾರೆ.



ಹೀಗೆ ಅಪರಿಮಿತವಾದ ಪುಣ್ಯಗಳಿಗೆ ಪಾತ್ರರಾಗುತ್ತಾರೆ." ಎಂದು ತನಗೆ ತಾನೇ ಹೇಳಿಕೊಳ್ಳುವನು ಗಂಗಯ್ಯ. ಅವನಿಗೆ ದೊಡ್ಡ ವಿಚಾರವೇ ಹಿಡಿಯಿತು. "ಈ ಉತ್ಸವದಲ್ಲಿ ಗಡಿಗೆ ಪಾತ್ರ ತಯಾರಿಸುವ ಕುಂಬಾರರೂ, ಭಜಂತ್ರಿಗಳೂ, ಹರಿದಾಸರೂ, ಭಜನೆಗೋಷ್ಠಿಯವರೂ, ಕಡೆಗೆ ಸಂತರ್ಪಣೆಯ ಅಡಿಗೆಯವರೂ, ಕಸಮುಸುರೆಯವರೂ ಸಹ ತಮ್ಮ ತಮ್ಮ ಶಕ್ತ್ಯಾನುಸಾರವಾಗಿ ಮಹಾದೇವಿಯ ಸೇವೆ ಮಾಡಿ ಪುಣ್ಯ ಸಂಪಾದಿಸಿಕೊಳ್ಳುತ್ತಾರೆ. ಆದರೆ ನಾನೇನು ಮಾಡಿದ್ದೇನೆ? ಏನೂ ಇಲ್ಲ. ನನ್ನಿಂದ ಏನೂ ಮಾಡಲಾಗದು. ಆ ಮಹಾ ತಾಯಿಗೆ ನಾನು ಏನನ್ನೂ ಮಾಡಲಾರದವನು." ಎಂದು ಗಂಗಯ್ಯನು ಕಣ್ಣೀರು ತುಂಬಿ ನಿಟ್ಟುಸಿರು ಬಿಟ್ಟನು. ಉತ್ಸವ ಪ್ರಾರಂಭವಾದ ಮೇಲೆ ಒಂಬತ್ತು ದಿನಗಳೂ ಆಲಯ ಭೂವೈಕುಂಠವೆನಿಸಿತು. ಇದನ್ನೆಲ್ಲಾ ಕಣ್ಣು ತುಂಬಾ ನೋಡಿದ ಗಂಗಯ್ಯನಿಗೆ ಆನಂದದೊಂದಿಗೆ ಆವೇದನೆ ಕೂಡಾ ಸೇರಿಕೊಂಡಿತು. "ಇಷ್ಟು ಜನರು ಈ ಮಹಾದೇವಿಗೆ ಎಷ್ಟೆಷ್ಟೋ ವಿಧವಾಗಿ ಸೇವೆ ಮಾಡಿದರು. ನಾನೇನೂ ಮಾಡಲಿಲ್ಲ." ಎಂದು ಅವನು ತನಗೆ ತಾನೇ ದುಃಖಿಸಿಕೊಂಡನು. ಒಂಬತ್ತನೇ ದಿನದಲ್ಲಿ ಅವನಿಗೊಂದು ಒಳ್ಳೆಯ ಆಲೋಚನೆ ಬಂದಿತು. ಅದರಿಂದ ಅವನ ಚಿಂತೆ ಪೂರ್ತಿ ಪರಿಹಾರವಾಯಿತು.

ಆದಿನ ರಾತ್ರಿ ಪೂಜೆಯಾದ ಮೇಲೆ ದೇವಾಲಯದಿಂದ ಎಲ್ಲರೂ ಹೊರಟುಹೋದರು. ಗುಡಿಯ ಬಾಗಿಲು ಹಾಕುವುದಕ್ಕೆ ಮೊದಲು ಒಳಗೇನಾದರೂ ಉಳಿದಿದೆಯೋ ನೋಡಲು ಮುಖ್ಯ ಅರ್ಚಕನು ಗುಡಿಯೊಳಗೆ ಬಂದನು. ಅಲ್ಲಿ ಅವನ ಕಣ್ಣಿಗೆ ಒಂದು ವಿಚಿತ್ರ ದೃಶ್ಯವು ಕಂಡಿತು.

ಹೂಗಳಿಂದಲೂ, ಕುಂಕುಮದಿಂದಲೂ ಮಿರಿಮಿರಿ ಹೊಳೆಯುವ ದೇವಿಯ ವಿಗ್ರಹದ ಮುಂದೆ ಗಂಗಯ್ಯನು ರಂಗೋಲಿ ಹಾಕಿ, ಅದರ ಮೇಲೆ ಚೆಂಡುಗಳನ್ನೂ, ಕತ್ತಿಗಳನ್ನೂ ಆಡಿಸುವ ತನ್ನ ಗಾರುಡೀ ವಿದ್ಯೆ ತೋರಿಸುತ್ತಿದ್ದನು.



ಅವನನ್ನು ನೋಡಿದ ಕೂಡಲೇ ಅರ್ಚಕನು ಗಾಬರಿಯಾಗಿ ಧರ್ಮಕರ್ತನ ಮನೆಗೆ ಓಡಿಹೋಗಿ "ಅಯ್ಯಾ ! ಬೇಗ ಬನ್ನಿ ! ಆ ಭಂಡ ಗಂಗಯ್ಯ ಗುಡಿಯೊಳಗೆ ಮಾಡುವ ಕೆಲಸವನ್ನು ನೋಡಿರಿ !" ಎಂದನು. "ಏನು ಮಾಡುತ್ತಾನೆ ?" ಎಂದು ಆತುರದಿಂದ ಕೇಳಿದನು ಧರ್ಮಕರ್ತ.

"ಎಂತಹ ಅಪಚಾರ ! ಗುಡಿಯೊಳಗಿನ ದೇವಿಯ ವಿಗ್ರಹದ ಎದುರಿನಲ್ಲಿ ತನ್ನ ಗಾರುಡೀ ವಿದ್ಯೆ ತೋರಿಸುತ್ತಿದ್ದಾನೆ. ಅವನಿಗೆ ಹುಚ್ಚೇ ಹಿಡಿದಿದೆಯೋ ಏನೋ !" ಎಂದನು ಅರ್ಚಕ.

"ನೀವು ಹೋಗಿ ಶಾಸ್ತ್ರಿಗಳನ್ನೂ, ಅವಧಾನಿಗಳನ್ನೂ ಕರೆದುಕೊಂಡು ಬನ್ನಿ" ಎಂದು ಅರ್ಚಕನನ್ನು ಕಳುಹಿಸಿ ಧರ್ಮಕರ್ತನು ನೇರಾಗಿ ಗುಡಿಗೆ ಹೊರಟನು. ಧರ್ಮಕರ್ತನು ಸಪ್ಪಳ ಮಾಡದೆ ಗುಡಿಯ ಬಾಗಿಲ ಬಳಿಗೆ ಹೋಗಿ ಓರೆಯಾಗಿ ತೆರೆದ ಬಾಗಿಲ ಸಂದಿನಿಂದ ಒಳಕ್ಕೆ ಇಣಿಕಿ ನೋಡಿದನು. ಅವನ ಶರೀರದ ಮೇಲೆ ರೋಮಾಂಚನವೆದ್ದಿತು.

ಗುಡಿಯೊಳಗೆ ಗಂಗಯ್ಯನು ನಿದ್ದೆ ಮಾಡುವಂತೆ ಬಿದ್ದಿದ್ದನು. ದೇವಿ ಅವನ ತಲೆಯನ್ನು ತನ್ನ ಮಡಿಲಲ್ಲಿ ಇಟ್ಟುಕೊಂಡು, ಒಂದು ಕೈಯಲ್ಲಿ ಬೀಸಣಿಕೆ ಹಿಡಿದು ಬೀಸುತ್ತ, ಎರಡನೇ ಕೈಯಿಂದ ತನ್ನ ಸೀರೆಯ ಸೆರಗಿನ ತುದಿಯಿಂದ ಅವನ ಬೆವರನ್ನು ಒರೆಸುತ್ತಿದ್ದಳು. ವಿಗ್ರಹದ ಸ್ಥಳದಲ್ಲಿ ವಿಗ್ರಹವೇ ಇರಲಿಲ್ಲ.

ಕೂಡಲೇ ಧರ್ಮಕರ್ತನು ಬಾಗಿಲಿನ ಹತ್ತಿರವೇ ಸಾಷ್ಟಾಂಗವಾಗಿ ಬಿದ್ದು ಗಟ್ಟಿಯಾಗಿ ದೇವೀ ಸ್ತೋತ್ರವನ್ನು ಪಠಿಸತೊಡಗಿದನು.

ಅಷ್ಟರಲ್ಲಿ ಕೆಲಮಂದಿ ಬ್ರಾಹ್ಮಣರನ್ನು ಕರೆದುಕೊಂಡು ಅರ್ಚಕನು ಅಲ್ಲಿಗೆ ಬಂದನು. ಧರ್ಮಕರ್ತನ ಸ್ಥಿತಿಯನ್ನು ನೋಡಿ ಅರ್ಚಕನು "ಇದೇನು ಸ್ವಾಮೀ ! ಏನಾಯಿತು ?" ಎಂದು ಕೇಳಿದನು.

ಧರ್ಮಕರ್ತನು ಎದ್ದು ನಿಂತನು. ಎಲ್ಲರೂ ಗುಡಿಯೊಳಗೆ ಕಾಲಿಟ್ಟರು. ಈಗ ವಿಗ್ರಹವು ಯಥಾಸ್ಥಾನದಲ್ಲೇ ಇರುವ ಹಾಗೇ ಇದ್ದಿತು. ಗಂಗಯ್ಯ ನಿಶ್ಚಿಂತೆಯಾಗಿ ನಿದ್ರಿಸಿಕೊಂಡಿದ್ದನು. ಧರ್ಮಕರ್ತನು ತಾನು ನೋಡಿದ ದೃಶ್ಯವನ್ನು ಕುರಿತು ಉಳಿದವರೊಂದಿಗೆ ವರ್ಣಿಸಿ ಹೇಳಿದನು.

ಆ ಮಾತನ್ನು ಬ್ರಾಹ್ಮಣರು ನಂಬಲಿಲ್ಲ. ಆದರೆ ನೆಲದ ಮೇಲೆ ಕುಂಕುಮದಲ್ಲಿ ದೇವಿಯ ಪಾದಗಳ ಗುರುತು ಸ್ಪಷ್ಟವಾಗಿ ಕಾಣುತ್ತಿದ್ದುವು. ವಿಗ್ರಹಕ್ಕೆ ಉಡಿಸಿದ ಸೀರೆಯ ಸೆರಗು ಬೆವರಿನಿಂದ ಒದ್ದೆಯಾಗಿದ್ದಿತು. "ನಾವೆಲ್ಲಾ ಕಳ್ಳ ಭಕ್ತರು. ಈ ಗಂಗಯ್ಯನೊಬ್ಬನೇ ದೇವಿಯ ಮುದ್ದು ಮಗ !" ಎಂದನು ಧರ್ಮಕರ್ತ.





# ಮಹಾಸಾಧ್ವಿ

ಬ್ರಹ್ಮದತ್ತನು ಕಾಶೀ ರಾಜ್ಯವನ್ನು ಪರಿಪಾಲಿಸಿ ಕೊಂಡಿದ್ದ ಕಾಲದಲ್ಲಿ, ಬೋಧಿಸತ್ವನು ಕಾಶೀ ನಗರದ ಸಮೀಪದಲ್ಲಿದ್ದೊಂದು ಗ್ರಾಮದಲ್ಲಿ ಒಬ್ಬ ಸಂಪನ್ನನಾದ ಗೃಹಸ್ಥನಿಗೆ ಮಗನಾಗಿ ಹುಟ್ಟಿದನು. ಆದುದರಿಂದ ಯಾವ ಕುಂದುಕೊರತೆಗಳೂ ಇಲ್ಲದೆ ಅಲ್ಲಿ ಬೆಳೆಯುತ್ತಿದ್ದನು.

ಬೆಳೆಯುತ್ತಿದ್ದಂತೆ ಸಮಸ್ತ ವಿದ್ಯೆಗಳನ್ನೂ ಕಲಿತು ಬುದ್ಧಿವಂತನಾದ ಮಗನಿಗೆ ಯುಕ್ತವಯಸ್ಸು ಬಂದ ಕೂಡಲೇ ತಂದೆ ತಾಯಿಗಳು ಅವನಿಗೆ ಮದುವೆ ಮಾಡಿದರು. ಕಾಶೀ ನಗರದಲ್ಲಿದ್ದ ಒಂದು ಗೌರವಸ್ಥ ಶ್ರೀಮಂತ ಕುಟುಂಬದವರು ಬೋಧಿಸತ್ವನಂತಹ ವರನಿಗೆ ಸಂತೋಷದಿಂದ ತಮ್ಮ ಮಗಳನ್ನು ಕೊಟ್ಟರು. ಆ ಕನ್ಯೆಯ ಹೆಸರು ಸುಜಾತೆ. ಸುಂದರಿಯಾದ ಸುಜಾತೆ ಸುಗುಣವತಿಯೂ ವಿವೇಕವತಿಯೂ ಆಗಿದ್ದು ಗಂಡನಿಗೂ ಅತ್ತೆ ಮಾವಂದಿರಿಗೂ ಪರಿಚರ್ಯೆಗಳನ್ನು ಮಾಡುತ್ತ ಎಲ್ಲರಿಗೂ ಅಚ್ಚುಮೆಚ್ಚಿನವಳಾಗಿದ್ದಳು.

ಬೋಧಿಸತ್ವನು ಕೂಡಾ ಅವಳ ಮೇಲೆ ತುಂಬಾ ಅನುರಾಗವುಳ್ಳವನಾಗಿದ್ದನು. ಗಂಡಹೆಂಡಿರಿಬ್ಬರೂ ಒಂದೇ ಮಾತು, ಒಂದೇ ಮನಸ್ಸಿನವರಾಗಿ ನೋಡುವವರಿಗೆ ಮುದ್ದಾಗಿ ಮುಚ್ಚಟೆಯಾಗಿ ಕಾಣುತ್ತಿದ್ದರು.

ಸ್ವಲ್ಪ ಕಾಲ ಕಳೆದ ಮೇಲೆ ಒಂದುದಿನ ಸುಜಾತೆ ತನ್ನ ಗಂಡನೊಂದಿಗೆ, "ನನಗೆ ಅಮ್ಮನನ್ನೂ ಅಪ್ಪನನ್ನೂ ನೋಡಿಬರಬೇಕೆಂದು ಕಾಣುತ್ತಾ ಇದೆ. ಅವರು ಮುದುಕರಾಗಿಬಿಟ್ಟಿದ್ದಾರೆ. ನೀವು ಕೂಡಾ ನನ್ನೊಂದಿಗೆ ಜತೆಯಾಗಿ ಬಂದರೆ ಒಳ್ಳೇದಿತ್ತು. ಹೋಗೋಣವೆ?" ಎಂದಳು.

ಇದಕ್ಕೆ ಬೋಧಿಸತ್ವನು ಬಹಳ ಸಂತೋಷಪಟ್ಟು "ಹಾಗೆಯೇ ಹೋಗಿ ಬರೋಣ. ನನಗೂ ಅತ್ತೆ ಮಾವಂದಿರನ್ನು ನೋಡಬೇಕೆಂದು ಬಹಳ ಕಾಲದಿಂದ ಕೋರಿಕೆಯಾಗಿದೆ. ಮನೇ ಹತ್ತಿರ ಅವಸರದ ಕೆಲಸ ವಿದ್ದುದರಿಂದಲೇ ಮಾತಾಡದಿದ್ದೆ. ನನಗೂ ಅತ್ತೆ ಮಾವಂದಿರನ್ನು ನೋಡಬೇಕೆಂದು ತುಂಬಾ ಇದೆ. ಸಿದ್ಧಳಾಗು ಹಾಗಾದರೆ" ಎಂದನು.

ಮರುದಿನವೇ ಪ್ರಯಾಣಕ್ಕೆ ಎಲ್ಲವೂ ಸಿದ್ಧವಾಯಿತು. ಅಗತ್ಯವಿದ್ದ ವಸ್ತುಗಳನ್ನು ಗಾಡಿಯಲ್ಲಿ ಏರಿಸಿಕೊಂಡು ಇಬ್ಬರೂ ಹೊರಟರು. ಸುಜಾತೆ

ಗಾಡಿಯೊಳಗೆ ಕುಳಿತಿದ್ದರೆ, ಬೋಧಿಸತ್ವನು ಮುಂದಿನ ಸಾರಥಿಯಾಸನದಲ್ಲಿ ಕುಳಿತು ಗಾಡಿಯನ್ನು ಚಾಲಿಸುತ್ತಿದ್ದನು.

ಹೀಗೆ ಪ್ರಯಾಣಮಾಡಿ ಕಾಶೀ ನಗರದ ಮೇರೆಯನ್ನು ಸೇರಿದ ಮೇಲೆ, ಒಂದು ಮರದ ಕೆಳಗೆ ಗಾಡಿಯನ್ನು ನಿಲ್ಲಿಸಿ, ಇಬ್ಬರೂ ಇಳಿದು ಸಮೀಪದಲ್ಲಿದ್ದ ಕೆರೆಯಲ್ಲಿ ಕೈ ಕಾಲು ಮುಖ ತೊಳೆದು ತಾವು ತಂದುಕೊಂಡ ಆಹಾರವನ್ನು ಭುಜಿಸಿ, ಹಸಿವೆ ತೀರಿಸಿಕೊಂಡರು. ಸ್ವಲ್ಪ ಹೊತ್ತು ವಿಶ್ರಾಂತಿ ತೆಗೆದುಕೊಂಡು, ಮತ್ತೆ ಮೊದಲಿನಂತೆ ಗಾಡಿಯಲ್ಲೇರಿ ನಗರವನ್ನು ಪ್ರವೇಶಿಸಿದರು.

ಬೋಧಿಸತ್ವನ ಗಾಡಿ ನಗರವನ್ನು ಪ್ರವೇಶಿಸಿದ ಅದೇ ಸಮಯದಲ್ಲಿ ಕಾಶೀರಾಜನು ಆನೆಯ ಮೇಲೆ ಅಂಬಾರಿಯಲ್ಲಿ ಕುಳಿತು ನಗರದಲ್ಲಿ ಮೆರವಣಿಗೆ ಹೊರಟಿದ್ದನು. ಆ ಮೆರವಣಿಗೆಯನ್ನು ನೋಡಬೇಕೆಂದು ಸುಜಾತೆಗೆ ಕುತೂಹಲವೆದ್ದಿತು. ಅವಳು ಗಂಡನ ಅನುಮತಿ ಪಡೆದು ಗಾಡಿಯಿಂದಿಳಿದು ಮುಂದೆ ನಡೆಯುತೊಡಗಿದಳು. ಬೋಧಿಸತ್ವನು ಗಾಡಿಯಲ್ಲಿ ಹಿಂದಿನಿಂದ ಹೋಗುತ್ತಿದ್ದನು.

ಅಂಬಾರಿಯ ಮೇಲೆ ಕುಳಿತಿದ್ದ ಕಾಶೀರಾಜನು ಅತ್ಯಂತ ಸುಂದರಿಯಾದ ಸುಜಾತೆಯನ್ನು ನೋಡಿಬಿಟ್ಟನು. ಕೂಡಲೇ ಅವಳನ್ನು ತನ್ನ ಮಡದಿಯಾಗಿ ಮಾಡಿಕೊಳ್ಳಬೇಕೆಂದು ಅವನಿಗೆ ಬುದ್ಧಿ ಹುಟ್ಟಿತು. ರಾಜನು ಅವಳನ್ನು ಕುರಿತು ವಿಚಾರಿಸಲಾಗಿ, ಅವಳು ಯಾರ ಮಗಳು, ಯಾವನ ಪತ್ನಿ ಎಂಬ ಸಂಗತಿಗಳೆಲ್ಲಾ ಅವನಿಗೆ ಗೊತ್ತಾಯಿತು. ಗಾಡಿಯಲ್ಲಿರುವವನೇ ಅವಳ ಗಂಡನೆಂದೂ ತಿಳಿದನು.

ರಾಜನು ತನ್ನ ವಿಶ್ವಾಸಪಾತ್ರನಾದ ಭಟನನ್ನು ಕರೆದು ಅವನ ಕೈಗೆ ರಹಸ್ಯವಾಗಿ ತನ್ನ ಕಿರೀಟವನ್ನು ಕೊಟ್ಟು, "ಈ ಕಿರೀಟವನ್ನು ಯಾರಿಗೂ ಗೊತ್ತಾಗದ ಹಾಗೆ ಅಲ್ಲಿ ಕಾಣುವ ಗಾಡಿಯೊಳಗೆ ಇಟ್ಟು ಬಾ" ಎಂದು ಹೇಳಿದನು.

ರಾಜನ ದುರಾಲೋಚನೆ ಅತ್ಯಂತ ಕ್ರೂರ ದಾರಿಯನ್ನು ಹಿಡಿದಿತ್ತು. ಸುಜಾತೆಯ ಗಂಡನನ್ನು



ಹೇಗಾದರೂ ಕೊನೆಗಾಣಿಸಿಬಿಟ್ಟರೆ, ನಿರಾತಂಕವಾಗಿ ಸುಜಾತೆಯನ್ನು ತನ್ನ ರಾಣಿಯಾಗಿ ಮಾಡಿಕೊಳ್ಳ ಬಹುದೆಂದು, ಈ ವ್ಯೂಹವನ್ನು ಪ್ರಯೋಗಿಸಿದ್ದನು.

ಆ ಭಟನು ಬೋಧಿಸತ್ವನಿಗೆ ಗೊತ್ತಾಗದ ಹಾಗೆ ರಾಜನ ಕಿರೀಟವನ್ನು ಗಾಡಿಯೊಳಗೆ ತುರುಕಿ ಬಿಟ್ಟನು. ಮತ್ತೆ ಸ್ವಲ್ಪ ಹೊತ್ತು ಕಳೆಯುವಷ್ಟರಲ್ಲಿ ಜನರ ನಡುವೆ, "ಮಹಾರಾಜರ ಕಿರೀಟವನ್ನು ಯಾರೋ ಕದ್ದರು !" ಎಂದು ಕಲಕಲರವವೆದ್ದಿತು.

ರಾಜನು ತನ್ನ ಭಟರಿಗೆ ಕಿರೀಟವನ್ನು ಅಪಹರಿಸಿ ದವನನ್ನು ಹುಡುಕಿ ಹಿಡಿದು ತರುವಂತೆ ಆಜ್ಞೆ ಮಾಡಿದನು. ಒಬ್ಬ ಭಟನಿಗೆ ಬೋಧಿಸತ್ವನ ಗಾಡಿಯಲ್ಲಿದ್ದ ಕಿರೀಟವು ಕಾಣಿಸಿತು. ಮತ್ತೇನಿದೆ ? ಬೋಧಿಸತ್ವನನ್ನು ಹಿಡಿದುಕಟ್ಟಿ ಎಳೆದುಕೊಂಡು ಹೋಗಿ ರಾಜನ ಮುಂದೆ ನಿಲ್ಲಿಸಿದರು.

ರಾಜನು ಅತ್ಯಂತ ಉಗ್ರನಾಗಿ, "ಇವನೋ ? ಈ ಸಂಭಾವಿತ ಸೋಗಿಸವನೋ ನನ್ನ ಕಿರೀಟ ಕದ್ದ ಕಳ್ಳ ! ಈ ದುಷ್ಟನನ್ನು ಎಳೆದುಕೊಂಡು ಹೋಗಿ ಶಿರಚ್ಛೇದ ಮಾಡಿಬಿಡಿ !" ಎಂದು ಆಜ್ಞೆ ಮಾಡಿದನು. ತನ್ನ ವ್ಯೂಹವು ಅಂದುಕೊಂಡ ಹಾಗೆಯೇ ಜಯಪ್ರದವಾಯಿತೆಂದು ರಾಜನು ತನ್ನೊಳಗೆ ಸಂತೋಷಿಸಿಕೊಂಡಿರುವಾಗ, ಭಟರು ಬೋಧಿಸತ್ವನಿಗೆ ಕೊರಡೆಯಿಂದ ಹೊಡೆಯುತ್ತ ಬೀದಿ ಗಳಲ್ಲಿ ತಿರುಗಿಸಿ ಅವಮಾನಪಡಿಸಿದರು. ಆ ಮೇಲೆ ಅವನ ತಲೆ ಕಡಿಯಲು ನಗರದ ಹೊರಭಾಗದ ಬಲಿಪೀಠದ ಕಡೆಗೆ ಎಳೆದುಕೊಂಡು ಹೋದರು.

ಈ ಸಂಗತಿಯನ್ನು ತಿಳಿದು ಸುಜಾತೆ ಗಂಡನ ಹಿಂದೆಯೇ ಶೋಕಿಸುತ್ತಾ ಹೋದಳು. "ನಿಮಗೆ ಇಂಥಾ ಗತಿ ನನ್ನಿಂದಲೇ ಬಂದಿತು," ಎಂದು ವಿಲಪಿಸುತ್ತಾ ಅವಳು ಬಲಿಪೀಠದ ಹತ್ತಿರ ಹೋಗಿ, ಆವೇದನೆಯಿಂದ, "ನಿರಪರಾಧಿಗಳನ್ನು ರಕ್ಷಿಸುವ ದೇವರೇ ಇಲ್ಲವೇ ? ದುಷ್ಟರ ದುಸ್ತಂತ್ರಗಳು ಹೀಗೆಯೇ ನಡೆಯುತ್ತಾ ಇರಬೇಕೇ ?" ಎಂದು ಆಕ್ರೋಶಿಸ ತೊಡಗಿದಳು. ಮಹಾಸಾಧ್ವಿಯಾದ ಸುಜಾತೆ ಕಲ್ಲು ಕರಗುವಂತೆ ಆಕ್ರೋಶಿಸುವ



ಆರ್ತನಾದವು ಸ್ವರ್ಗವನ್ನು ಪ್ರವೇಶಿಸಿ, ದೇವೇಂದ್ರನ ಸಿಂಹಾಸನವು ಗಡಗಡ ನಡುಗಿತು.

"ಇದಕ್ಕೇನು ಕಾರಣ?" ಎಂದುಕೊಳ್ಳುತ್ತಾ ದೇವೇಂದ್ರನು ಆಶ್ಚರ್ಯಪಟ್ಟು, ದಿವ್ಯದೃಷ್ಟಿಯಿಂದ ನೋಡಿದನು, ನಡೆಯಲಿರುವ ಘೋರವು ಅವನಿಗೆ ತಿಳಿಯಿತು. ಆ ಕೂಡಲೇ ಇಂದ್ರನು ಒಂದು ವಿಚಿತ್ರ ಪರಿಸ್ಥಿತಿಯನ್ನು ಕಲ್ಪಿಸಿದನು. ಅದೇ ಇಂದ್ರಜಾಲ. ಅದರಿಂದ ಬೋಧಿಸತ್ವನ ಸ್ಥಾನದಲ್ಲಿ ರಾಜನೂ, ರಾಜನ ಸ್ಥಾನದಲ್ಲಿ ಬೋಧಿಸತ್ವನೂ ಇರುವಂತಾಯಿತು. ರಾಜನಿಗೆ ಮಾತಾಡುವ ಶಕ್ತಿಯೇ ಹೋಯಿತು. ಆನೆಯ ಮೇಲೆ ಅಂಬಾರಿಯಲ್ಲಿರುವವನು ರಾಜನೆಂದೇ ಎಲ್ಲರೂ ನಂಬಿಕೊಂಡಿದ್ದರು. ನಿಜಕ್ಕೂ ಅಲ್ಲಿರುವವನು ರಾಜಲಾಂಛನಗಳನ್ನು ಹೊಂದಿಕೊಂಡಿರುವ ಬೋಧಿಸತ್ವನಾಗಿದ್ದನು. ತಳವಾರರ ವಶದಲ್ಲಿ ಬೋಧಿಸತ್ವನ ಉಡುಪುಗಳಲ್ಲಿ ಬಲಿಪೀಠಕ್ಕೆ ತಲೆಯೊಡ್ಡಿಸಲ್ಪಟ್ಟವನು ದುಷ್ಟಬುದ್ಧಿಯ ರಾಜನೇ. ಈ ರಹಸ್ಯವನ್ನು ಅರಿಯದ ತಳವಾರರು, ರಾಜಾಜ್ಞೆಯ ಪ್ರಕಾರ ತಮ್ಮ ಅಧೀನದಲ್ಲಿದ್ದ ಮನುಷ್ಯನ ತಲೆಯನ್ನು ಕಡಿದರು. ಪ್ರಾಣ ಹೋದ ಕೂಡಲೇ ದುಷ್ಟನಾದ ಕಾಶೀರಾಜನಿಗೆ ನಿಜರೂಪವು ಬಂದಿತು. ತಮ್ಮಿಂದ ಶಿರಚ್ಛೇದಕ್ಕೆ ಗುರಿಯಾಗಿ ಸತ್ತವನು ರಾಜನೆಂದು ಗೊತ್ತಾಗಿ ತಳವಾರರು ತಬ್ಬಿಬ್ಬಾದರು. ಸತ್ತವನು ರಾಜನೆಂದು ಪ್ರಜೆಗಳಿಗೆಲ್ಲಾ ಗೊತ್ತಾಯಿತು. ಕೂಡಲೇ ಭಾರೀ ಕಲಕಲರವವೆದ್ದಿತು. ಇಂತಹ ವಿಚಿತ್ರ ಘಟನೆಗೆ ಕಾರಣರಾದವರಾರೆಂದು ತಿಳಿಯದೆ ಎಲ್ಲರೂ ಆಶ್ಚರ್ಯ ಪಡತೊಡಗಿದರು.

ಆಗ ದೇವೇಂದ್ರನು ಬೋಧಿಸತ್ವನಿಗೂ, ಪ್ರಜೆಗಳಿಗೂ ಆಕಾಶದಲ್ಲಿ ಕಾಣಿಸಿ, ನಡೆದ ಸಮಾಚಾರವನ್ನು ಹೇಳಿ, "ರಾಜನಾಗಿರುವವನು ಮಾಡಬಾರದ ಕೆಲಸಮಾಡಿದ ದುಷ್ಟರಾಜನು ಸತ್ತುಹೋದನು. ಈ ಕ್ಷಣದಿಂದ ಬೋಧಿಸತ್ವನೇ ನಿಮಗೆಲ್ಲರಿಗೂ ರಾಜ. ಸುಜಾತೆ ಪಟ್ಟದ ರಾಣಿ!" ಎಂದು ಹೇಳಿ ಅಂತರ್ಧಾನನಾದನು.

ತುಂಬಿ ಬಂದ ಪಾಪದ ಕೊಡವು ಕ್ಷಣಮಾತ್ರದಲ್ಲಿ ಮುಳುಗುವಂತೆ ದುಷ್ಟರಾಜನು ಬಲಿಪೀಠಕ್ಕೆ ಆಹುತಿಯಾದುದನ್ನು ನೋಡಿ ಪ್ರಜೆಗಳಿಗೆಲ್ಲ ಸಂತೋಷವೇ ಆಯಿತು. ದೇವೇಂದ್ರನು ಹೇಳಿದ ಪ್ರಕಾರವೇ ಬೋಧಿಸತ್ವನನ್ನು ರಾಜನಾಗಿ ಅತಿ ವೈಭವದಿಂದ ಸ್ವೀಕರಿಸಿಕೊಂಡರು. ಸುಜಾತೆಯೂ ರಾಣಿಯಾಗಿ ರಾರಾಜಿಸಿದಳು.

ಆ ದಿನಗಳಿಂದ ಕಾಶೀರಾಜ್ಯದಲ್ಲಿ ಧರ್ಮವು ನಾಲ್ಕು ಪಾದಗಳಲ್ಲಿ ನಿಂತು ನಡೆಯತೊಡಗಿತು. ಕಾಲಕ್ಕೆ ತಕ್ಕ ಹಾಗೆ ಮಳೆಸುರಿಯುತ್ತ ದೇಶವು ಸುಭಿಕ್ಷವಾಯಿತು.






# ಎರಡು ನಗರಗಳ ನಾಶ

ಪ್ರಸೇನಜಿತ್ತು ಆಳಿಕೊಂಡಿದ್ದಾಗ ಕೋಸಲವು ಬಲವಾದ ರಾಜ್ಯವಾಗಿತ್ತು. ಅದರ ರಾಜಧಾನಿ ಶ್ರಾವಸ್ತಿ. ಕಪಿಲವಸ್ತುವಿನ ರಾಜರಾದ ಶಾಕ್ಯರಿಗೆ, ತಾವು ಪ್ರಸೇನಜಿತ್ತುವಿಗಿಂತ ದೊಡ್ಡವಂಶದವ ರೆಂಬ ಹೆಮ್ಮೆಯಿರುವ ಸಂಗತಿ, ಚಾರನಮೂಲಕ ಪ್ರಸೇನಜಿತ್ತುವಿಗೆ ಗೊತ್ತಾಯಿತು.

ತನ್ನ ಸಾಮಂತರಾದ ಶಾಕ್ಯರಿಗೆ ತನ್ನ ವಂಶದ ಮೇಲೆ ಅಲ್ಪ ಭಾವನೆಯಿರುವುದನ್ನು ಪ್ರಸೇನ ಜಿತ್ತುವಿನಿಂದ ಸಹಿಸಲಾಗಲಿಲ್ಲ. ಅವನು ತಿರುಗಾಡುವ ನೆವನದಲ್ಲಿ ಕಪಿಲವಸ್ತುವಿಗೆ ಹೋದನು. ಶಾಕ್ಯರು ಅವನಿಗೆ ಭಾರೀ ಸ್ವಾಗತ ವಿತ್ತರು. ಪ್ರಸೇನಜಿತ್ತು ತಾನು ಒಬ್ಬಳು ಶಾಕ್ಯ ರಾಜಕುಮಾರಿಯನ್ನು ಮದುವೆಯಾಗ ಬೇಕೆಂದಿರುವುದಾಗಿ ಹೇಳಿದನು. ಈ ಮದುವೆ ಯಿಂದ ತನ್ನ ಅಂತಸ್ತು ಹೆಚ್ಚುವುದೆಂದುಕೊಂಡನು.







ಆದರೆ ಶಾಕ್ಯರು ಇಕ್ಕಟ್ಟಿಗೆಬಿದ್ದರು. ಬಲಿಷ್ಠನಾದ ಪ್ರಸೇನಜಿತ್ತುವಿನ ಆಶೆಯನ್ನು ತಿರಸ್ಕರಿಸಿದರೆ ಅಪಾಯವಾಗುವುದೆಂದು ತಿಳಿದು, ತಮ್ಮೊಳಗೆ ಗುಟ್ಟು ಮಾತಾಡಿಕೊಂಡು, ಒಬ್ಬಳು ಕನ್ಯೆ ಯೊಂದಿಗೆ ಪ್ರಸೇನಜಿತ್ತುವಿಗೆ ವಿವಾಹ ನಡೆಸಿದರು.

ಪ್ರಸೇನಜಿತ್ತು ಸಂತೋಷದಿಂದ ಶ್ರಾವಸ್ತಿಗೆ ಹಿಂದಿರುಗಿದನು. ಆ ರಾತ್ರಿ ಅವನು ಮದುವೆಯ ಬಹುಮಾನ ವಸ್ತುಗಳನ್ನು ಪರಿಶೀಲಿಸುವಾಗ ಒಂದು ಪತ್ರವನ್ನು ನೋಡಿದನು. ಮದುಮಗಳ ಮೇಲೆ ಕೋಪವಿದ್ದ ಶಾಕ್ಯಬಾಲಿಕೆಯೊಬ್ಬಳು ಆ ಪತ್ರ ಬರೆದಿದ್ದಳು. ಒಬ್ಬ ಶಾಕ್ಯನಾಯಕನ ದಾಸಿಯ ಪುತ್ರಿಯನ್ನು ಪ್ರಸೇನಜಿತ್ತು ವಿವಾಹವಾಗಿದ್ದನೆಂದು ಆ ಪತ್ರದಿಂದ ಗೊತ್ತಾಯಿತು.







ಪ್ರಸೇನಜಿತ್ತು ಕೋಪಾವೇಶದಿಂದ ಭವನದ ಮೇಲಂತಸ್ತಿಗೆ ಹೋಗಿ, ಸೈನಿಕರನ್ನು ಕೂಡಿಸುವಂತಹ ದೊಡ್ಡ ಗಂಟೆಯನ್ನು ಮೊಳಗಿಸಿದನು ಆ ಕೂಡಲೇ ಸಾವಿರಾರು ಸೈನಿಕರು ಪ್ರಾಂಗಣದಲ್ಲಿ ಕೂಡಿ ರಾಜಾಜ್ಞೆಯನ್ನು ಕಾದು ನಿಂತರು.

ಕಪಿಲವಸ್ತುವಿನ ಮೇಲೆ ದಾಳಿ ಹೊರಡುವ ಮೊದಲು ತನ್ನ ವಧುವನ್ನು ಒಂದುಸಾರಿ ನೋಡಿ ಹೋಗೋಣವೆಂದು ಪ್ರಸೇನಜಿತ್ತು ತನ್ನ ಕೋಣೆಗೆ ಬಂದನು. ಮುಗ್ಧಳಾದ ಆ ಹುಡುಗಿ ದುಃಖಿಸುವುದನ್ನು ನೋಡಿದ ಕೂಡಲೇ ಅವನ ಮನಸ್ಸು ಬದಲಾಯಿಸಿತು. ಕೂಡಲೇ ಅವನು ಸೈನಿಕರನ್ನು ಹಿಂದೆ ಕಳುಹಿಸಿ ಅವಳು ತನ್ನ ಪಟ್ಟದರಾಣಿ ಎಂದು ಪ್ರಕಟಿಸಿದನು.






ಕಾಲಕ್ರಮದಲ್ಲಿ ರಾಣಿ ಗರ್ಭಿಣಿಯಾಗಿ ಒಬ್ಬ ಮಗನನ್ನು ಹಡೆದಳು. ಅವನಿಗೆ ವಿರೋಧಕ ನೆಂದು ಹೆಸರು. ಅವನು ಬೆಳೆದು ದೊಡ್ಡವನಾಗಿ ಕ್ಷತ್ರಿಯೋಚಿತ ವಿದ್ಯೆಗಳಲ್ಲಿ ಬಲು ಗಟ್ಟಿಗ ನಾದನು. ಒಂದು ಸಾರಿ ಅವನು ತನ್ನ ತಾತನನ್ನು ನೋಡಲು ಕಪಿಲವಸ್ತುವಿಗೆ ಹೊರಟನು. ಅಲ್ಲಿ ಭೋಜನ ವೇಳೆಯಲ್ಲಿ ಶಾಕ್ಯರಾರೂ ತನ್ನ ಪಂಕ್ತಿ ಯಲ್ಲಿ ಕುಳಿತುಕೊಳ್ಳದಿರುವುದನ್ನು ನೋಡಿ ಅವನಿಗೆ ಆಶ್ಚರ್ಯವಾಯಿತು.

ಶಾಕ್ಯರ ಈ ವಿಚಿತ್ರವರ್ತನೆಗೆ ಕಾರಣವೇನು? ಶ್ರಾವಸ್ತಿಗೆ ಹಿಂದಿರುಗಿದ ಕೂಡಲೇ ವಿರೋಧಕನು ಈ ಸಂಗತಿಯನ್ನು ಹೇಳಿ ತಾಯಿಯೊಡನೆ ಕಾರಣವೇನೆಂದು ಕೇಳಿದನು. ಅವಳು ಏನೂ ಮುಚ್ಚಿಡದೆ ನಡೆದ ಸಂಗತಿಯನ್ನು ಹೇಳಿದಳು. ವಿರೋಧಕನು ಕೋಪದಿಂದ ಅತ್ಯುಗ್ರನಾದನು.






ಅವನು ತಂದೆಯ ಬಳಿಗೆ ಹೋಗಿ, "ಶಾಕ್ಯರು ಮಾಡಿದ ಇಷ್ಟು ದೊಡ್ಡ ಅವಮಾನವನ್ನು ನೀವು ಹೇಗೆ ಸಹಿಸಿ ಸುಮ್ಮನಿದ್ದಿರಿ?" ಎಂದು ಕೇಳಿದನು. ತನ್ನ ವೃದ್ಧಾಪ್ಯದಶೆಯಲ್ಲಿ ಮಗನು ತನ್ನ ಮೇಲೆ ತಿರುಗಿ ಬೀಳುವನೆಂದುಕೊಂಡು ಪ್ರಸೇನಜಿತ್ತು, ಮಗಧರಾಣಿಯಾಗಿರುವ ತನ್ನ ಮಗಳ ಮನೆಗೆ ಹೋಗಿ, ಚಿಂತೆ ಹಿಡಿದು ರೋಗಿ ಯಾಗಿ ಅಲ್ಲಿಯೇ ತೀರಿಹೋದನು. ವಿರೋಧಕನೇ ರಾಜನಾದನು.

ವಿರೋಧಕನು ಕಪಿಲವಸ್ತುವಿನಮೇಲೆ. ಯುದ್ಧಕ್ಕೆ ಹೊರಡಲು ಅವಸರಪಡಿಸಿದನು. ಸೇನಾಧಿಪತಿಗಳು ಅದಕ್ಕೆ ಇದು ಸಮಯವಲ್ಲವೆಂದರು. ಅವನ ತಂದೆಯನ್ನು ಅವಮಾನ ಪಡಿಸಿದ ಶಾಕ್ಯರಾರೂ ಈಗ ಬದುಕಿಲ್ಲವೆಂದು ಮಂತ್ರಿಗಳೂ ಹೇಳಿದರು. ಆದರೂ ವಿರೋಧಕನು ಕಪಿಲವಸ್ತುವಿನಮೇಲೆ ಯುದ್ಧಕ್ಕೆ ಹೊರಟನು.







ಶಾಕ್ಯರು ಯುದ್ಧಕ್ಕೆ ಸಿದ್ಧರಾಗಿರಲಿಲ್ಲ. ಆ ಕಾರಣದಿಂದ ವಿರೋಧಕನ ಸೈನ್ಯವನ್ನು ಇದಿರಿಸಿ ಯುದ್ಧ ಮಾಡಲಾರದೆ ಹೋದರು. ವಿರೋಧಕನು ಕಪಿಲವಸ್ತು ರಾಜಭವನಗಳ ಅಮೂಲ್ಯ ವಸ್ತುಗಳನ್ನೂ ನಗರವನ್ನೂ ಅಗ್ನಿಗೆ ಆಹುತಿ ಮಾಡಿದನು. ಅಸಂಖ್ಯಾಕರಾದ ಶಾಕ್ಯರು ಕೊಲ್ಲಲ್ಪಟ್ಟರು. ಆ ಮೇಲೆ ವಿರೋಧಕನು ತನ್ನ ರಾಜಧಾನಿ ಶ್ರಾವಸ್ತಿಗೆ ಹಿಂದಿರುಗಿದನು.

ಅವನು ಶ್ರಾವಸ್ತಿಗೆ ಬಂದಾಗ ರಾಜಭವನಗಳು ನೆಲಮಟ್ಟವಾಗಿದ್ದುವು. ಮಗಧರಾಜನು ತನ್ನ ಮಾವಯ್ಯನಾದ ಪ್ರಸೇನಜಿತ್ತುವನ್ನು ವಿರೋಧಕನು ಕಷ್ಟಗಳ ಪಾಲುಮಾಡಿದನೆಂಬ ಕೋಪದಲ್ಲಿ ಶ್ರಾವಸ್ತಿಯ ಮೇಲೆ ದಾಳಿಮಾಡಿ ನಾಶಗೊಳಿಸಿದನು. ಆ ಮೇಲೆ ಶ್ರಾವಸ್ತಿ ಮಗಧ ರಾಜ್ಯದೊಂದಿಗೆ ಸೇರಿ ಹೋಯಿತು.





# ಹುಡುಗಾಟದ ತಮ್ಮ

ಒಂದು ಊರಿನಲ್ಲಿ ರಂಗರಾಜನೆಂಬುವನು ಚಿಕ್ಕತನದಲ್ಲಿಯೇ ತಂದೆ ತಾಯಿಯರನ್ನು ಕಳೆದುಕೊಂಡು ತಾನೇ ತಾನಾದನು. ರಾಮರಾಜನೆಂಬ ಒಬ್ಬ ತಮ್ಮನನ್ನು ಪೋಷಿಸಿ ಬೆಳೆಸುವ ಭಾರ ಅವನ ಮೇಲೆಯೇ ಬಿದ್ದಿತ್ತು. ತಂದೆತಾಯಿಗಳಿಲ್ಲದ ಲೋಪವು ತಮ್ಮನಿಗೆ ತಿಳಿಯದಂತೆ ಬಹಳ ಅಕ್ಕರೆಯಿಂದ ತನ್ನ ತಮ್ಮನನ್ನು ಬೆಳೆಸಿಕೊಂಡಿದ್ದನು.

ಆಮೇಲೆ ತಾನೊಂದು ಉದ್ಯೋಗವನ್ನು ಸಂಪಾದಿಸಿಕೊಂಡುದು ಮಾತ್ರವಲ್ಲದೆ ರಾಮರಾಜನಿಗೆ ಚೆನ್ನಾಗಿ ಓದಿಸಲು ತೊಡಗಿದನು. ರಂಗರಾಜನು ಕೆಲಸ ಮಾಡುವ ಕಾರ್ಯಾಲಯದ ಅಧಿಕಾರಿಯೊಬ್ಬನು ತನ್ನ ಮಗಳನ್ನು ರಂಗರಾಜನಿಗೆ ಕೊಟ್ಟು ಮದುವೆ ಮಾಡಿದನು.

ಅದಾಗಿ ಕೆಲವು ದಿನಗಳ ಮೇಲೆ ರಾಮರಾಜನ ಓದು ಪೂರ್ತಿಯಾಯಿತು. ರಂಗರಾಜನು ತನಗೆ ಗೊತ್ತಿದ್ದವರನ್ನು ಹಿಡಿದು ಅವರ ಮೂಲಕವಾಗಿ ತನ್ನ ತಮ್ಮನಿಗೆ ಚಿಕ್ಕದೊಂದು ಉದ್ಯೋಗವು ಸಿಗುವಂತೆ ಮಾಡಿದನು. ಆದರೆ ರಾಮರಾಜನು ಮೂರನೇ ದಿನದಲ್ಲೇ ಆ ಉದ್ಯೋಗವನ್ನು ಬಿಟ್ಟು ಬಹಳ ಕೋಪದಿಂದ ಮನೆಗೆ ಬಂದುಬಿಟ್ಟನು. ರಂಗರಾಜನು ಆಶ್ಚರ್ಯಪಟ್ಟು, "ಏಕೆ? ಏನಾಯಿತು? ಯಜಮಾನನು ಏನಾದರೂ ಹೇಳಿದನೇನು?" ಎಂದು ಕೇಳಿದನು.

ರಾಮರಾಜನು ಸಿಡಿ ಮಿಡಿಗುಟ್ಟುತ್ತ, "ಆ ಯಜಮಾನನಿಗೆ ಸ್ವಲ್ಪ ಕೂಡಾ ಮರ್ಯಾದೆ ಗೊತ್ತಿಲ್ಲ. ನನಗೆ ಕೊಟ್ಟ ಉದ್ಯೋಗ ಒಂದಾದರೆ ಮಾಡಿಸುವ ಕೆಲಸ ಇನ್ನೊಂದು. ನ್ಯಾಯವೇ ಇದು? ಇಂಥಾ ಅಡ್ಡಾ ದಿಡ್ಡಿಯಾದ ಉದ್ಯೋಗ ನನಗೆ ಬೇಡಣ್ಣ" ಎಂದನು.

ರಂಗರಾಜನು ಸರಿಯೆಂದು ಆಗ ಸುಮ್ಮನಿದ್ದು, ಮತ್ತೆ ಕೆಲವು ದಿನಗಳ ಮೇಲೆ ತಮ್ಮನಿಗೆ ಇನ್ನೊಂದು ಉದ್ಯೋಗ ಸಿಗುವಂತೆ ಮಾಡಿದನು. ರಾಮರಾಜನು ಆ ಉದ್ಯೋಗವನ್ನೂ ಮೂರನೇ ದಿನದಲ್ಲೇ ಬಿಟ್ಟು ಮನೆಗೆ ಬಂದನು.

ಈಸಾರಿ ಅಣ್ಣನು ತಮ್ಮನಿಗೆ ಸ್ವಲ್ಪ ಬೈದೇ ಬುದ್ಧಿ ಹೇಳಿದನು. ಆಗ ರಾಮರಾಜನು ಅಣ್ಣನೊಂದಿಗೆ, "ಅಣ್ಣಾ, ನನ್ನ ಮೇಲೆ ಅಧಿಕಾರ ನಡೆಸುವವನು ಪ್ರತಿಯೊಂದು ಸಣ್ಣ ವಿಷಯಕ್ಕೂ

ಬಿ. ಎ. ರಾವ್




ನನ್ನನ್ನು ನಿಂದಿಸುತ್ತಾನೆ. ಮಾತು ಮಾತಿಗೂ ತೆಗೆದು ಹಾಕುತ್ತೇನೆ, ತೆಗೆದು ಹಾಕುತ್ತೇನೆ; ಅನ್ನುತ್ತಾನೆ. ಹೀಗೆ ನನ್ನ ಅಭಿಮಾನವನ್ನು ಕೆಣಕುತ್ತಿದ್ದರೆ ಹೇಗೆ ಸಹಿಸಲಾದೀತು ? 'ನೀನೇನು ತೆಗೆದು ಹಾಕುವುದು, ನಾನೇ ಹೋಗಿಬಿಡುತ್ತೇನೆ,' ಎಂದು ನಾನಾಗಿಯೇ ಕೆಲಸ ಬಿಟ್ಟು ಬಂದೆನು" ಎಂದನು.

"ಹೀಗೇ ನೀನು ಪ್ರತಿ ಉದ್ಯೋಗವನ್ನೂ ಏನೋ ಕಾರಣ ಹೇಳಿ ಬಿಟ್ಟು ಬಂದರೆ ನಿನಗಾಗಿ ಎಲ್ಲಿ ತಾನೇ ಉದ್ಯೋಗ ಸಿಗುತ್ತೆ ? ಇನ್ನು ಮೇಲೆ ಸಿಗುವ ಉದ್ಯೋಗದಲ್ಲಿ ಎಷ್ಟೇ ಸಾಧಕ ಬಾಧಕಗಳಿದ್ದರೂ ಸಹಿಸಿಕೊಂಡಿರು. ಬಿಟ್ಟು ಬರಬೇಡ. ಕಷ್ಟವಾದರೆ ನನ್ನ ಹತ್ತಿರ ಬಂದು ಹೇಳು. ಆ ಸಮಸ್ಯೆಯನ್ನು ನಾನು ಸರಿಪಡಿಸಿ ಬಿಡುತ್ತೇನೆ" ಎಂದು ತುಂಬಾ ಎಚ್ಚರಿಕೆಕೊಟ್ಟನು ರಂಗರಾಜ.

ರಾಮರಾಜನು ಅಣ್ಣ ಹೇಳುವ ಮಾತುಗಳನ್ನು ಕೇಳಿ, ಮೌನವಾಗಿ ತಲೆಯಾಡಿಸಿದನು, ಅಷ್ಟೇ.

ಒಂದು ವಾರ ಕಳೆದ ಮೇಲೆ ರಂಗರಾಜನು ರಾಮರಾಜನನ್ನು ಕರೆದುಕೊಂಡು ಒಂದು ಕಾರ್ಯಾಲಯಕ್ಕೆ ಕರೆದೊಯ್ದು ಅಲ್ಲಿ ಕೆಲಸಕ್ಕೆ ಸೇರಿಸಿದನು. ತಮ್ಮನಿಗಾಗಿ ಅವನು ಸಂಪಾದಿಸಿಕೊಟ್ಟ ಉದ್ಯೋಗದಲ್ಲಿ ಅವನನ್ನು ಸೇರಿಸುವಾಗ, ಸ್ವಲ್ಪ ಹೊತ್ತು ಹತ್ತಿರವೇ ಇದ್ದು ತಕ್ಕ ಜಾಗ್ರತೆಗಳನ್ನು ಹೇಳಿ ಹಿಂದಿರುಗಿದನು.

ನಾಲ್ಕು ದಿನಗಳು ಕಳೆದ ಮೇಲೆ ರಾಮರಾಜನು ಅಣ್ಣನೊಂದಿಗೆ, "ಈ ಉದ್ಯೋಗವನ್ನಂತೂ ಅಸಲೇ ನನ್ನಿಂದ ಮಾಡಲಾಗದು. ನನ್ನನ್ನು ಏನೂ ತಿಳಿಯದ ಹುಡುಗನ ಲೆಕ್ಕದಲ್ಲಿ ನೋಡುತ್ತ ಮೇಲಿನ ಅಧಿಕಾರಿಗಳು ಮಾತಾಡುತ್ತಾರೆ. ನಾನು ಮಾಡುವ ಕೆಲಸ ಅವರಿಗೆ ಸ್ವಲ್ಪವೂ ತೃಪ್ತಿಕರವಾಗಿಲ್ಲ" ಎಂದನು.

ರಂಗರಾಜನು ಉಕ್ಕುವ ಕೋಪವನ್ನು ನುಂಗಿಕೊಳ್ಳುತ್ತ, "ಹಾಗಾದರೆ ಈ ಕೆಲಸವನ್ನೂ ಬಿಟ್ಟು ಬಂದೆಯೇನು ?" ಎಂದು ಕೇಳಿದನು.

"ಇನ್ನೂ ಬಿಡಲಿಲ್ಲ. ಬಿಟ್ಟುಬರುವ ಮೊದಲು ನಿನಗೆ ತಿಳಿಸಬೇಕು ಎಂದೆಯಲ್ಲಾ?" ಎಂದನು ರಾಮರಾಜ.

"ಓಹೋ ! ನನ್ನ ಹತ್ತಿರ ಹೇಳಿದ್ದೇನೋ ಸರಿ. ನೀನೇನು ಮಾಡಬೇಕೆಂದು ಆಲೋಚಿಸಿರುವೆ ?" ಎಂದು ಕೇಳಿದನು ರಂಗರಾಜ.

"ಹಳಿಕೆಯ ಮಾತುಗಳನ್ನು ಕೇಳುತ್ತ ಈ ಉದ್ಯೋಗದಲ್ಲೇ ಇದ್ದು ನನ್ನ ಆತ್ಮಾಭಿಮಾನವನ್ನು ಕೊಂದುಕೊಳ್ಳಲಾರೆನು" ಎಂದನು ರಾಮರಾಜ.

"ಹಾಗಾದರೆ ನಿನ್ನ ಇಷ್ಟ ಬಂದ ಹಾಗೇ ಮಾಡಪ್ಪ" ಎಂದು ರಂಗರಾಜನು ಅಲ್ಲಿಂದೆದ್ದು ಹೊರಟುಹೋದನು.

ಈ ಸಂಗತಿ ನಡೆದ ನಾಲ್ಕು ದಿನಗಳ ಮೇಲೆ ರಂಗರಾಜನು ತುಂಬಾ ಚಿಂತೆಯಿಂದ ಮನೆಗೆ ಬಂದನು. ಅವನ ಮುಖದಲ್ಲಿದ್ದ ಹೀನ ಕಳೆಯನ್ನು

ನೋಡಿ ಹೆಂಡತಿಯೂ, ತಮ್ಮನೂ " ಏನಾಯಿತು ? ಮೈ ಸರಿಯಿಲ್ಲವೇ ? " ಎಂದು ಕೇಳಿದರು.

"ನನ್ನ ಉದ್ಯೋಗ ಹೋಯಿತು !" ಎಂದನು ರಂಗರಾಜ ಭಾರವಾದ ಸ್ವರದಲ್ಲಿ.

ರಾಮರಾಜನು ಆಶ್ಚರ್ಯದಿಂದ "ಆಶ್ಚರ್ಯವಾಗಿದೆ ! ಬಹಳ ಕಾಲದಿಂದ ಮಾಡುವ ಉದ್ಯೋಗ ಹೇಗೆ ಹೋಯಿತು ? " ಎಂದು ಕೇಳಿದನು.

"ಆದ್ದರಿಂದಲೇ ಇಷ್ಟೊಂದು ಚಿಂತೆಯಾಗಿದೆ. ಇನ್ನೊಂದು ಉದ್ಯೋಗ ಹುಡುಕಬೇಕಾದರೂ ಎಲ್ಲಿಯೂ ಸಿಗಲಾರದು" ಎಂದನು ರಂಗರಾಜ.

ಕ್ರಮವಾಗಿ ಆ ಕುಟುಂಬದಲ್ಲಿ ಆರ್ಥಿಕ ಸಮಸ್ಯೆ ಏಳತೊಡಗಿತು. ಬರಬರುತ್ತ ಹಣದ ಮುಗ್ಗಟ್ಟು ಹೆಚ್ಚಾಯಿತು. ದಿನ ಕಳೆಯುವುದೇ ಕಷ್ಟವಾಗ ತೊಡಗಿತು. ನಾಳಿನ ಹಸಿವೆಗೆ ಏನು ಮಾಡುವುದೆಂಬ ಪ್ರಶ್ನೆ ಕುಣಿಯುತೊಡಗಿತು. ರಾಮರಾಜನು ಬುದ್ಧಿ ತಿಳಿದಂದಿನಿಂದಲೂ ಉಪವಾಸವಿದ್ದು ತಿಳಿಯದವನು. ತಮ್ಮನಿಗೆ ಅದುವರೆಗೂ ಯಾವ ಕೊರತೆಯೂ ಇಲ್ಲದಂತೆ ನೋಡಿಕೊಂಡಿದ್ದನು. ಈ ಪರಿಸ್ಥಿತಿಯಲ್ಲಿ ರಾಮರಾಜನು ತನಗೆ ಸಿಕ್ಕಿದ ಉದ್ಯೋಗಗಳನ್ನು ತಾನೇ ಕೈಯಾರೆ ಬಿಟ್ಟು ಬಂದುದನ್ನು ನೆನೆದು ವ್ಯಥೆ ಪಡಲು ತೊಡಗಿದನು. ತಾನಾದರೂ ಉದ್ಯೋಗದಲ್ಲಿರುತ್ತಿದ್ದರೆ ಕುಟುಂಬವು ಇಂತಹ ಇಕ್ಕಟ್ಟಿಗೆ ಸಿಕ್ಕಿ ಬೀಳುತ್ತಿದ್ದಿಲ್ಲ. ಈಗ ತಾನು ಉದ್ಯೋಗ ಮಾಡುವೆನೆಂದರೂ ಉದ್ಯೋಗ ಕೊಡುವವರಿಲ್ಲ. ಇಷ್ಟು ಕಾಲ ಅಣ್ಣನ ಆಶ್ರಯ ಬಲವಿದ್ದುದರಿಂದ ಸಿಕ್ಕಿದ ಉದ್ಯೋಗಗಳ ಮೇಲೆ ಅಸಹ್ಯಭಾವ ತೋರಿಸಿದ್ದನು. ಈಗ ಯಾವುದಾದರೂ ಕೂಲಿ ಕೆಲಸವಾದರೂ ಮಾಡಿ ಕುಟುಂಬ ಪೋಷಣೆಗೆ ಏನೋ ಇಷ್ಟು ಸಂಪಾದಿಸಲೇಬೇಕು.

ರಾಮರಾಜನು ಹೀಗೆ ನಿಶ್ಚಯಿಸಿಕೊಂಡು, ತನ್ನ ನಿಶ್ಚಯವನ್ನು ಅಣ್ಣನೊಡನೆ ಹೇಳಿದನು. ತಮ್ಮನಲ್ಲಿ ಉಂಟಾದ ಬದಲಾವಣೆಯನ್ನು ನೋಡಿ ರಂಗರಾಜನು ಸಂತೋಷಪಟ್ಟು, "ಮೂರನೇ ಸಾರಿ ನೀನು ಬಿಟ್ಟು ಬಂದ ಉದ್ಯೋಗವು ಇನ್ನೂ ಖಾಲಿ



ಯಾಗಿದೆಯೋ ಏನೋ. ಮೊದಲು ಒಂದುಸಾರಿ ಅಲ್ಲಿಗೆ ಹೋಗಿ ವಿಚಾರಿಸಿ ಬಂದು ಬಿಡು" ಎಂದನು.

ರಾಮರಾಜನು ಕಂಬನಿ ತುಂಬಿದವನಾಗಿ, "ನನಗೇನೂ ನಂಬುಗೆ ಇಲ್ಲಣ್ಣಾ. ಆದಿನ ಮೇಲಧಿಕಾರಿಗಳೊಂದಿಗೆ ತಗಾದೆ ಮಾಡಿ ಕೆಲಸ ಬಿಟ್ಟು ಹೋದವನಾಗಿ ಇನ್ನೂ ಆ ಜಾಗವನ್ನು ಹಾಗೇ ಇಟ್ಟಿರುತ್ತಾರಾ? ಯಾವ ಅದೃಷ್ಟವಂತನಿಗೋ ಕೊಟ್ಟಿರುತ್ತಾರೆ" ಎಂದನು.

"ಆದರೂ ಒಂದುಸಾರಿ ಹೋಗಿ ಮಾತಾಡಿ ಬಂದುಬಿಡು. ನಷ್ಟವೇನಿಲ್ಲವಷ್ಟೆ?" ಎಂದು ರಂಗರಾಜನು ರಾಮರಾಜನನ್ನು ಒತ್ತಾಯಿಸಿ ಅಲ್ಲಿಗೆ ಕಳುಹಿಸಿದನು.

ಆ ಉದ್ಯೋಗದ ಜಾಗ ಇನ್ನೂ ಖಾಲಿಯಾಗಿಯೇ ಇದ್ದಿತು. ಮೇಲಿನ ಅಧಿಕಾರಿಗಳು ಮೊದಲು ಕೋಪಿಸಿಕೊಂಡರೂ, ರಾಮರಾಜನು ತುಂಬಾ ವಿನಯವಿಧೇಯತೆಗಳಿಂದ ಬೇಡಿಕೊಂಡ ಮೇಲೆ ಅವನನ್ನು ಮತ್ತೆ ಕೆಲಸದಲ್ಲಿಟ್ಟುಕೊಳ್ಳಲು ಅಂಗೀಕರಿಸಿದರು. ಈಗತಾನೇ ರಾಮರಾಜನಿಗೆ ಮೊತ್ತಮೊದಲನೇ ಸಾರಿಯಾಗಿ ಉದ್ಯೋಗಕ್ಕಿರುವ ಮಹತ್ವವೇನೆಂದು ಗೊತ್ತಾಯಿತು. ಅವನು ತನಗೆ ಉದ್ಯೋಗವು ದೊರಕಿತೆಂಬ ವಾರ್ತೆಯನ್ನು ಮಹಾ ಸಂತೋಷದಿಂದ ಅಣ್ಣನಿಗೆ ಹೇಳಿದನು.

ಮರುದಿನ ಅಣ್ಣನೂ ಸಹ ಒಳ್ಳೆಯ ದುಸ್ತು ಹಾಕಿಕೊಂಡು, ಉದ್ಯೋಗಕ್ಕೆ ಹೊರಡುವವನಂತಿರುವುದನ್ನು ನೋಡಿ ರಂಗರಾಜನು, "ನಿನಗೂ ಪುನಃ ಉದ್ಯೋಗ ದೊರಕಿತೇ ಅಣ್ಣಾ?" ಎಂದು ಕೇಳಿದನು ಆಶ್ಚರ್ಯದಿಂದ.

ರಂಗರಾಜನು ನಕ್ಕು, "ನನ್ನ ಉದ್ಯೋಗ ಹೋಗಲೇ ಇಲ್ಲ ತಮ್ಮಾ. ನನಗೆ ನಾನು ಮಾಡುವ ಉದ್ಯೋಗದ ಮೇಲೆ ಶ್ರದ್ಧಾಸಕ್ತಿಗಳೂ, ಗೌರವವೂ ಇದೆ. ಹಾಗಿರುವಾಗ ನನ್ನನ್ನೇಕೆ ತೆಗೆದು ಹಾಕುತ್ತಾರೆ? ನಿನಗೆ ನೀನು ಮಾಡಲು ಒಪ್ಪಿದ ಕೆಲಸದ ಮೇಲೆ ಸಣ್ಣ ದೃಷ್ಟಿ ಇತ್ತು. ನಿರ್ಲಕ್ಷ್ಯವಾಗಿ ವರ್ತಿಸಿದೆ. ಆದುದರಿಂದಲೇ ಸೇರಿದ ಪ್ರತಿ ಉದ್ಯೋಗವನ್ನೂ ಏನೋ ನೆವನ ಹೇಳಿ ಬಿಟ್ಟುಬಿಟ್ಟೆ. ನಿನ್ನೆಯ ವರೆಗೂ ನಾವು ಅನುಭವಿಸಿದ ಹೀನ ಪರಿಸ್ಥಿತಿಯನ್ನು ಬೇಕಂತ ನಾನಾಗಿಯೇ ಕಲ್ಪಿಸಿಕೊಂಡದ್ದೇ. ನಿನ್ನ ವಿಷಯವನ್ನು ಅಲ್ಲಿಯ ಅಧಿಕಾರಿಗಳಿಗೆ ಹೇಳಿ, ಆ ಸ್ಥಳವು ಖಾಲಿಯಾಗಿರಿಸುವಂತೆ ಮಾಡಿದ್ದೆ" ಎಂದನು.

ತಾನು ಇಷ್ಟು ಕಾಲದವರೆಗೆ ತೋರಿಸಿದ ಹುಡುಗಾಟದ ಬುದ್ಧಿಗಾಗಿ ರಾಮರಾಜನು ತುಂಬಾ ನಾಚಿಕೊಂಡು ಅಣ್ಣನ ಕಾಲು ಒಡಿದನು. ಅಣ್ಣನು ತಮ್ಮನನ್ನು ಆಲಿಂಗಿಸಿಕೊಂಡನು.



# ಪ್ರಾಮಾಣಿಕತೆ

ಅವಂತೀ ರಾಜ್ಯದ ಮಂತ್ರಿ ಅಮರಪಾಲನು ನೀತಿಗೂ ಪ್ರಾಮಾಣಿಕತೆಗೂ ಹೆಸರಾದವನು. ಒಂದುದಿನ ನೆರೆಯ ರಾಜ್ಯದಲ್ಲಿ ಅವನ ಸೋದರಳಿಯ ಭೂಪಾಲನೆಂಬವನು ಅಮರಪಾಲನ ಮನೆಗೆ ಬಂದು, ಮಾತಿನ ಸಂದರ್ಭದಲ್ಲಿ, "ಮಾವಯ್ಯಾ, ನಿಮ್ಮ ಅವಂತೀ ರಾಜ್ಯದಲ್ಲಿರುವ ಸೈನಿಕರ ಸಂಖ್ಯೆ ನಿಜಕ್ಕೂ ಎಷ್ಟು?" ಎಂದು ಕೇಳಿದನು.

ಅದು ತುಂಬ ಗೋಪ್ಯ ವಿಷಯವಾದುದರಿಂದ, ಅಮರಪಾಲನು ಕೂಡಲೇ ಉತ್ತರ ಹೇಳದೆ, ತುಸು ಆಲೋಚಿಸಿ, "ನೋಡಪ್ಪಾ, ಇಂತಹ ಮುಖ್ಯವಾದ ರಹಸ್ಯವನ್ನು ಹೇಳಬೇಕಾದರೆ, ನೀನು ನನ್ನಿಂದ ಕೇಳಿದ್ದನ್ನು ಬೇರೆಲ್ಲಿಯೂ ಹೇಳಲಾರೆನೆಂದು ಪ್ರಮಾಣ ಮಾಡಬೇಕು" ಎಂದನು.

ತನ್ನ ಪ್ರಾಮಾಣಿಕತೆಯನ್ನು ಶಂಕಿಸುವನೆಂದುಕೊಂಡು ಭೂಪಾಲನು ತುಸು ಕೋಪದಿಂದ, "ಮಾವಯ್ಯಾ! ವೈದ್ಯಶಾಸ್ತ್ರಗಳನ್ನು ಓದಿ, ಯಜ್ಞ ಯಾಗಗಳನ್ನು ಮಾಡಿದ ಬೆಂಕಿಯಂಥ ಕುಲದಲ್ಲಿ ಹುಟ್ಟಿದ ನಾನು, ಮಾತು ತಪ್ಪಿ ರಹಸ್ಯವನ್ನು ಹೊರಗೆಡವಿದರೆ ಇಹಪರಗಳಲ್ಲಿ ಅಧೋಗತಿಯ ಪಾಲಾಗುತ್ತೇನೆ" ಎಂದು ಪ್ರಮಾಣ ಮಾಡಿದನು.

ಅಮರಪಾಲನು ಕೂಡಲೇ, "ನಾನು ಪ್ರಮಾಣದ ಸಂಗತಿ ಎತ್ತಿದ ಕೂಡಲೇ ನಿನ್ನ ತಂದೆಯ ದೊಡ್ಡತನವನ್ನು ಹೇಳಿ, ಅದರ ವಾರಸನಾದ ನಿನ್ನ ಪ್ರಾಮಾಣಿಕತೆಯನ್ನು ಹೇಳಿದಿ. ಚೆನ್ನಾಗೇ ಇದೆ. ಆದರೆ ನೀನು ಒಂದು ಸಂಗತಿಯನ್ನು ಮರೆತುಬಿಟ್ಟಿರುವಿ. ಅದೇನೆಂದರೆ, ನಾನು ಕೂಡಾ ರಾಜನ ರಹಸ್ಯಗಳನ್ನು ತಿಳಿದುಕೊಳ್ಳುವುದಕ್ಕೆ ಮೊದಲು ನನ್ನ ಪ್ರಾಮಾಣಿಕತೆಯನ್ನು ಶಂಕಿಸಬಾರದೆಂದು ನಿನ್ನ ಹಾಗೆಯೇ ಮಹಾರಾಜನ ಮುಂದೆ ಪ್ರಮಾಣಮಾಡಿದ್ದೇನೆ." ಎಂದನು.

ಭೂಪಾಲನಿಗೆ ಕೂಡಲೇ ತನ್ನ ತಪ್ಪು ಏನೆಂದು ಗೊತ್ತಾಯಿತು.





# ಕೋಪದ ಗಂಡ

ಒಂದು ಊರಿನಲ್ಲಿ ಲಕ್ಷ್ಮಮ್ಮ ಎಂಬವಳ ಮಗಳಿಗೆ ಮದುವೆಯಾಯಿತು. ಅಳಿಯನು ಮಗಳನ್ನು ಕರೆದು ಕೊಂಡು ಹೊರಟು ನಿಂತನು. ಆಗ ಲಕ್ಷ್ಮಮ್ಮ ಅಳಿಯನೊಂದಿಗೆ, "ನಾನು ಹೇಳಿದ್ದು ಮರೆಯ ಬೇಡಪ್ಪಾ. ಹೋಗುವ ದಾರಿಯಲ್ಲೇ ಶ್ರೀನಿವಾಸನ ಆಲಯವಿದೆ. ಇಬ್ಬರೂ ಅಲ್ಲಿಗೆ ಹೋಗಿ ಶ್ರೀನಿವಾಸನ ದರ್ಶನ ಮಾಡಿರಿ, ಮರಿಯಬೇಡಿ!" ಎಂದು ಎಚ್ಚರಿಸಿದಳು.

ಗಂಡನು ತೀರಿ ಹೋದ ಮೇಲೆ ಲಕ್ಷ್ಮಮ್ಮನು ಹಳ್ಳಿಮನೆಯಲ್ಲಿ ವ್ಯವಸಾಯ ನೋಡಿಕೊಳ್ಳುತ್ತಾ ಜೀವನ ಸಾಗಿಸಿಕೊಂಡು ಬಂದಿದ್ದಳು. ವಸಂತಿ ಅವಳಿಗೆ ಒಬ್ಬಳೇ ಮಗಳು. ನಗರದಲ್ಲಿ ಉದ್ಯೋಗ ಸಂಪಾದಿಸಿಕೊಂಡ ವೀರೇಶನೆಂಬವನು ವಸಂತಿಯನ್ನು ಒಪ್ಪಿ ಮದುವೆ ಮಾಡಿಕೊಂಡಿದ್ದನು. ಮದುವೆಯ ಗೌಜ ಮುಗಿದು ನಾಲ್ಕು ದಿನಗಳಾಗಿದ್ದುವು. ಮದುವೆ ಯಾದ ಕೂಡಲೇ ನೂತನ ದಂಪತಿಗಳನ್ನು ಶ್ರೀನಿವಾಸನ ದರ್ಶನಕ್ಕೆ ಕಳುಹಿಸುವೆನೆಂದು ಲಕ್ಷ್ಮಮ್ಮ ಮದುವೆಗೆ ಮೊದಲೇ ಹರಕೆ ಹೇಳಿಕೊಂಡಿದ್ದಳು. ವಸಂತಿಯೂ ವೀರೇಶನೂ ಶ್ರೀನಿವಾಸನ ಆಲಯ ವನ್ನು ತಲಪಿದಾಗ ಕತ್ತಲಾಗಿತ್ತು. ಅವರಿಗೆ ಬಹಳ ವಾಗಿ ಅಲೆದಾಡಿ ಕಷ್ಟಪಟ್ಟ ಮೇಲೆ ಸತ್ರದಲ್ಲಿ ಒಂದು ಕೋಣೆ ಸಿಕ್ಕಿತು.

"ಮುದುಕಿಗೆ ಬೇರೆ ಕೆಲಸವಿಲ್ಲ. ಹರಕೆ ಹೇಳಿ ಕೊಂಡಳಂತೆ ಹರಕೆ! ಕಷ್ಟಪಡಬೇಕು ನಾವು! ಇದೊಂದು ಕೋಣೆ ಸಿಕ್ಕದೆ ಹೋಗಿರುತ್ತಿದ್ದರೆ ನಮ್ಮ ಪಾಡು ಏನಾಗುತಿತ್ತು!" ಎಂದನು ವೀರೇಶ ಕೋಪದಿಂದ.

ತನ್ನ ತಾಯಿಯನ್ನು ಹಳಿಯುವ ಗಂಡನ ಮಾತು ಕೇಳಿ ವಸಂತಿ ಬೆರಗಾದಳು. ಗಂಡನು ತನ್ನ ಇದಿರಿ ನಲ್ಲಿಯೇ ಪಾಪದವಳಾದ ತನ್ನ ತಾಯಿಯನ್ನು ಇಷ್ಟು ಹೀನವಾಗಿ ನಿಂದಿಸುವುದನ್ನು ನೋಡಿ ಅವಳಿಗೆ ಸಂಕಟವಾಯಿತು. ಆಮೇಲೆ ಕೂಡಾ ಮಲಗಿ ನಿದ್ದೆ ಮಾಡುವವರೆಗೂ ಅಲ್ಲಿಯ ಅಸೌಕರ್ಯ ಗಳಿಗೆಲ್ಲಾ ಅತ್ತೆಯನ್ನೇ ಕಾರಣ ಹೇಳಿ ಬಯ್ಯುತ್ತಲೇ ಇದ್ದನು. ವಸಂತಿ ತಡೆಯಲು ನೋಡಿದ ಕೂಡಲೇ, "ನೀನು ಹಾಗೇ ಹೇಳುವಿ ಅಂತ ನನಗ್ಗೊತ್ತು. ಬಾಯಿ ಮುಚ್ಚಿ ಸುಮ್ಮನಿರು!" ಎಂದು ಅವಳನ್ನು ಗದರಿಸುತ್ತಿದ್ದನು.

ಎಂ. ಕೆ. ಈಶ್ವರರಾವ್

ಮರುದಿನ ದೇವರ ದರ್ಶನಕ್ಕೆ ಹೋಗುವ ಮೊದಲು ವೀರೇಶನು ಫಲಾಹಾರಗಳನ್ನು ತರಿಸಿದನು. "ದೇವರ ದರ್ಶನವಾದ ಮೇಲೆ ತಿನ್ನೋಣ" ಎಂದಳು ವಸಂತಿ.

"ಆಮೇಲೇನೂ ಬೇಡ. ಈಗಲೇ ಮುಗೀಲಿ. ನಾನು ಹೇಳಿದ ಹಾಗೆ ಕೇಳುವುದು ಬಿಟ್ಟು ನಿನ್ನ ಇಷ್ಟ ನನ್ನ ಮುಂದೆ ತೋರಿಸಬೇಡ. ತಿಂದು ಬಿಡು ಈಗಲೇ" ಎಂದು ಅವಳ ಮೇಲೆ ಸಿಡಿದು ಬಿದ್ದನು.

ವಸಂತಿಗೆ ಕಣ್ಣೀರು ತುಂಬಿತು. ದುಃಖವನ್ನು ತೋರಿಸಿಕೊಳ್ಳಲಿಕ್ಕೂ ಭಯ. ಗಂಡನಿಗೆ ಇಷ್ಟೊಂದು ಕೋಪವಿದೆಯೆಂದು ಅವಳಿಗೆ ಗೊತ್ತೇ ಇರಲಿಲ್ಲ. ಇಷ್ಟವಿಲ್ಲದಿದ್ದರೂ ಬಲವಂತದಿಂದ ಒಂದಿಷ್ಟು ಫಲಾಹಾರ ತಿಂದಳು.

ಆಮೇಲೆ ಇಬ್ಬರೂ ಗುಡಿಯೊಳಗೆ ಹೋಗಿ ದೇವರ ದರ್ಶನ ಮಾಡಿಕೊಂಡು ಬಂದರು. ವಸಂತಿ ಸಾಮಾನುಗಳನ್ನೆಲ್ಲ ಕಟ್ಟಿಕೊಳ್ಳುತ್ತ, "ದೇವರಗುಡಿ ತುಂಬಾ ಚೆನ್ನಾಗಿದೆ. ವಿಗ್ರಹದಲ್ಲಿ ನಮ್ಮ ಹೃದಯ ಅರಳುವ ಹಾಗೆ ಜೀವಕಳೆ ಒಸರುತ್ತಿದೆ. ಗಮನಿಸಿದಿರಾ ?" ಎಂದಳು ಗಂಡನೊಂದಿಗೆ.

"ನಿನ್ನ ಹರಟೆ ಪುರಾಣಕ್ಕೆ ಮಣ್ಣು ಬೀಳ ! ಯಾರು ಕೇಳಿದರು ನಿನ್ನ ಹತ್ತಿರ? ಮಾತಾಡದೆ ಕೆಲಸ ಮಾಡಲು ನಿನ್ನಿಂದಾಗದೇನು ? ಛೆ! ಛೆ! ಬರೇ ವಾಚಾಳಿ !" ಎಂದು ವೀರೇಶನು ಉಗ್ರನಾಗಿ ಹೇಳಿದನು.

ವಸಂತಿಗೆ ಗಾಬರಿಯಾಯಿತು. ಇಂತಹ ಕೋಪಿಷ್ಠನಾದ ಗಂಡನೊಂದಿಗೆ ಹೇಗೆ ಬಾಳುವೆನೋ ಎಂದು ತನ್ನೊಳಗೇ ನೊಂದುಕೊಂಡಳು. ಆ ದಿನ ಸಾಯಂಕಾಲದಲ್ಲಿ ಅವರಿಬ್ಬರೂ ನಗರವನ್ನು ಸೇರಿದರು.

ವಸಂತಿಗೆ ಹೊಸ ಸಂಸಾರವು ನರಕಪ್ರಾಯವಾಗಿತ್ತು, ಅವಳು ಕೇವಲ ಕೆಲಸದವಳ ಹಾಗೆ ಎಲ್ಲಾ ಕೆಲಸಗಳನ್ನೂ ಮಾಡಿಕೊಂಡು ಬಿದ್ದಿರಬೇಕೇ ಹೊರತು ಬಾಯಿ ತೆರೆದು ಏನೂ ಹೇಳಬಾರದು.



ಹೀಗೆಯೇ ಅವಳ ಯಾತನ ಪಡುತ್ತಿರಲು ಹಾಗೂ ಹೀಗೂ ಹದಿನೈದು ದಿನಗಳು ಕಳೆದುವು.

ಒಂದು ದಿನ ಸಾಯಂಕಾಲ ಯಾವನೋ ಒಬ್ಬನು ವೀರೇಶನ ಮನೆಯ ಬಾಗಿಲು ತಟ್ಟಿದನು. ವೀರೇಶನು ಕಾರ್ಯಾಲಯಕ್ಕೆ ಹೋಗಿದ್ದು ಮನೆಯಲ್ಲಿ ವಸಂತಿಯೊಬ್ಬಳೇ ಇದ್ದಳು. ಅವಳು ಬಾಗಿಲು ತೆರೆದಾಗ ಹೊರಗೆ ನಿಂತವನು ಗಡ್ಡ ಮೀಸೆ ಬೆಳ್ಳಗಾದ, ಐವತ್ತು ವಯಸ್ಸು ಮೀರಿದವನಾಗಿದ್ದನು.

"ನಮ್ಮ ವೀರೇಶನ ಮನೆ ಇದು ತಾನೇ ?" ಎಂದು ಅವನು ಬಹಳ ಸಲಿಗೆಯಿಂದ ಒಳಗೆ ಬಂದು ಕುಳಿತುಕೊಂಡನು.

ವಸಂತ ಸಂಕೋಚಪಡುತ್ತ ನೋಡುತ್ತಿರಲು, "ವೀರೇಶ ಕೆಲಸಕ್ಕೆ ಹೋಗಿದ್ದಾನೆ ಅಂತ ಕಾಣುತ್ತೆ. ಪರವಾಗಿಲ್ಲ. ನಾನು ನಿನಗೆ ಸಣ್ಣ ಮಾವನಾಗಬೇಕಮ್ಮ. ಸಂಕೋಚ ಬೇಡ. ಆ ಕುರ್ಚಿಲಿ ಕುಳಿತುಕೋ" ಎಂದನು ಮುದುಕ.



"ಹೌದನ್ನು. ಎಲ್ಲಾ ಆ ದೇವರ ಹಸರೇ. ಶಿವನೂ ರಾಮನೂ ಅನ್ಯೋನ್ಯರೇ.. ಈಗ ಆ ಶಿವಯ್ಯನ ತಮ್ಮಂದಿರು ಎಲ್ಲಿದ್ದಾರೆ ?" ಎಂದು ಮುದುಕನು ಅವರ ಹೆಸರುಗಳನ್ನು ಕೂಡಾ ಕೇಳಿ ತಿಳಿದುಕೊಂಡನು.

ತಾನು ಎಂಟು ಹತ್ತು ವರ್ಷಗಳಿಂದ ಪರಸ್ಥಳಗಳಲ್ಲಿ ತಿರುಗಾಡಿಕೊಂಡಿದ್ದುದರಿಂದ ತನಗೆಲ್ಲಾ ಮರೆತಿರುವುದಾಗಿಯೂ ಹೇಳಿದನು. ವಸಂತಿಗೆ ಅವನ ಮೇಲೆ ಅನುಮಾನವಿದ್ದರೂ ತನಗೆ ತಿಳಿದುದನ್ನು ಹೇಳಿಯೂ ಬಿಟ್ಟಳು. ಆ ಮೇಲೆ ಅವನಿಗೆ ತಿಂಡಿ ತೀರ್ಥಗಳನ್ನೂ ಕೊಟ್ಟಳು.

ಸಾಯಂಕಾಲವಾಗಿ ಹೊತ್ತು ಮುಳುಗಿದ ಮೇಲೆ ವೀರೇಶನು ಮನೆಗೆ ಬಂದನು.

"ಇವರು ನಿಮಗೆ ದೂರದ ಸಂಬಂಧದಲ್ಲಿ ಚಿಕ್ಕಪ್ಪ ನಾಗುವರಂತೆ." ಎಂದು ಏನೋ ಹೇಳಲು ನೋಡಿದಳು ವಸಂತಿ.

"ಸಾಕು ಬಾಯಿ ಮುಚ್ಚು. ನನಗೆ ಬಾಯಿಯಿದೆ. ಕೇಳಿ ತಿಳಿದುಕೊಳ್ಳಲು ನನಗೆ ಗೊತ್ತಿದೆ. ಹೋಗಿ ನಿನ್ನ ಕೆಲಸ ನೋಡಿಕೋ" ಎಂದು ಹೆಂಡತಿಯ ಮೇಲೆ ರೇಗಿ ಬಿದ್ದನು ವೀರೇಶ.

ವಸಂತಿ ಮಾತಾಡದೆ ಒಳಗೆ ಹೋಗಿಬಿಟ್ಟಳು. "ಏನೋ ವೀರಾ, ನನ್ನನ್ನು ನೋಡಿದ ನೆನಪಿದೆ ಯೇನೋ?" ಎಂದು ಆಪ್ಯಾಯತೆಯಿಂದ ಮಾತಾಡಿಸಿದನು ಆ ಮುದುಕ. ಹಾಗೆಯೇ ಅವನ ತಾಯಿ ತಂದೆ ಚಿಕ್ಕಪ್ಪಂದಿರ ಹೆಸರುಗಳನ್ನೂ ಹೇಳಿ, "ನಾನು ಊರು ಬಿಟ್ಟಾಗ ನೀನು ಸಣ್ಣವನು" ಎಂದನು,

ಅವನ ಮಾತುಗಳನ್ನೆಲ್ಲಾ ಕೇಳುತ್ತಿದ್ದಂತೆ ಆ ಮುದುಕನು ತನಗೆ ಬೇಕಾದವನೇ ಅನಿಸಿತು ವೀರೇಶನಿಗೆ.

ವೀರೇಶನು ಒಳಗೆ ಹೋಗಿ ವಸಂತಿಯೊಂದಿಗೆ, "ನಮ್ಮ ಚಿಕ್ಕಪ್ಪ ಅಪರೂಪವಾಗಿ ಬಂದವರು

ವಸಂತಿ ಕುಳಿತಳು. "ನಿನ್ನ ಅತ್ತೆ ಮಾವಂದಿರು ಎಲ್ಲಾ ಎಲ್ಲಿದ್ದಾರಮ್ಮಾ ?" ಎಂದು ಕೇಳಿದನು ಮುದುಕ.

"ನಾನೆಲ್ಲಿ ನೋಡಿದ್ದೇನೆ ? ಅವರು ಹೋಗಿ ಅನೇಕ ವರ್ಷಗಳಾಯಿತಂತಲ್ಲಾ ? ನಿಮಗ್ಗೊತ್ತಿಲ್ಲವೇ ?" ಎಂದು ವಸಂತಿ ಆ ಮುದುಕನನ್ನು ಆಶ್ಚರ್ಯದಿಂದ ನೋಡಿದಳು.

"ಹೌದು ಹೌದು. ನಾನು ಆಗ ಊರಲ್ಲಿದ್ದಿಲ್ಲ. ಸತ್ತುಹೋದರೆಂಬುದನ್ನು ನಂಬಲಿಕ್ಕೇ ಸಾಧ್ಯವಿಲ್ಲಮ್ಮ. ನನ್ನ ದೃಷ್ಟಿಗೆ, ಇಬ್ಬರೂ ಹೆಸರಿಗೆ ತಕ್ಕ ಹಾಗೆ ಸೀತಾರಾಮರ ಹಾಗೇ ಇದ್ದರು. ಅವರಂಥ ಸಜ್ಜನರು ಯಾರೂ ಇಲ್ಲಮ್ಮ" ಎಂದು ಮುದುಕನು ಕಡೇ ಮಾತುಗಳನ್ನು ಹೇಳುವಾಗ ಗದ್ಗದ ಕಂಠನಾಗಿ, ಉತ್ತರೀಯದಿಂದ ಕಣ್ಣುಗಳನ್ನು ಒತ್ತಿಕೊಂಡನು.

"ಅವರ ಹೆಸರು ಪಾರ್ವತೀ ಶಿವಯ್ಯರೆನ್ನುತ್ತಿದ್ದರಲ್ಲಾ?" ಎಂದಳು ವಸಂತಿ ಅನುಮಾನಪಡುತ್ತ.



ನಮ್ಮವರಿಗೆಲ್ಲ ಇವರ ಮೇಲೆ ಬಹಳ ಪ್ರೀತಿ, ಏನಾದರೂ ಉಪಚಾರ ಮಾಡಿದಿಯಾ ಇಲ್ಲವಾ?" ಎಂದು ಕೇಳಿದನು.

ಅವರ ಹೆಸರುಗಳನ್ನೆಲ್ಲ ತಾನೇ ಅವನಿಗೆ ಹೇಳಿದ ವಿಷಯವನ್ನು ಗಂಡನಿಗೆ ಹೇಳಬೇಕೆಂದು ಪ್ರಯತ್ನ ಪಟ್ಟಳು ವಸಂತಿ. ಅವಳು ಮಾತೆತ್ತಿದ ಕೂಡಲೇ "ಬಾಯಿ ಮುಚ್ಚು. ನಿನ್ನ ಕೆಲಸ ನೋಡು. ಏನಾದರೂ ಒಳ್ಳೇ ಅಡಿಗೆ ಮಾಡು" ಎಂದು ಅವಳನ್ನು ಮಾತಾಡಲು ಬಿಡದೆ ಹೊರಗೆ ಹೋದನು ವೀರೇಶ. ಅವರಿಬ್ಬರೂ ಮಾತಾಡಿಕೊಳ್ಳುತ್ತ ಹೊತ್ತು ಕಳೆದರು. ಅಡಿಗೆಯಾದ ಮೇಲೆ ವಸಂತಿ ಇಬ್ಬರಿಗೂ ಬಡಿಸಿದಳು. ಆ ಮೇಲೆ ಅವರಿಬ್ಬರಿಗೂ ನಡು ಕೋಣೆಯಲ್ಲಿ ಹಾಸಿಗೆಗಳನ್ನು ಹಾಸಿ, ಮಲಗಲು ಅಣಿಗೊಳಿಸಿದಳು. ಅವಳು ಅಡಿಗೆ ಮನೆಯಲ್ಲಿ ಚಾಪೆ ಹಾಸಿಕೊಂಡು ಮಲಗಿದಳು.

ಬೆಳಂಜಾಮದಲ್ಲಿ ಗಂಡನ ಕೂಗು ಕೇಳಿ ಅವಳಿಗೆ ಎಚ್ಚರವಾಯಿತು. ಬೇಗನೇ ಎದ್ದು ಗಂಡನ ಕೋಣೆಗೆ ಹೋದಳು. ಮುದುಕನು ಮಲಗಿದ್ದ ಹಾಸಿಗೆ ಖಾಲಿ ಯಾಗಿತ್ತು. ಮೂಲೆಯಲ್ಲಿದ್ದ ಪೆಟ್ಟಿಗೆ ತೆರೆದು ಕೊಂಡಿತ್ತು. ಬಟ್ಟೆಗಳು ಕೋಣೆಯಲ್ಲೆಲ್ಲಾ ಚೆಲ್ಲಾಪಿಲ್ಲಿ ಯಾಗಿದ್ದುವು.

"ಇಲ್ಲಿಗೆ ಬಂದ ಆ ಮುದುಕ ದೊಡ್ಡ ಕಳ್ಳ. ನಮ್ಮನ್ನು ನಂಬಿಸಿ ಇಲ್ಲಿ ಸೇರಿ, ರಾತ್ರಿಯಲ್ಲಿ ಪೆಟ್ಟಿಗೆಯ ಬಟ್ಟೆಗಳನ್ನೆಲ್ಲ ಎತ್ತಿ ಬಿಸುಟು, ಸಿಕ್ಕಿದ ಸಂಬಳದ ಹಣವನ್ನೆಲ್ಲಾ ಎತ್ತಿಕೊಂಡು ಹೋಗಿದ್ದಾನೆ." ಎಂದು ವೀರೇಶನು ಸಂಕಟಪಡುತ್ತಾ ಹೇಳಿದನು. ಅವನದೊಂದು ಚಿನ್ನದ ಉಂಗುರವೂ ಹೋಯಿತಂತೆ!

ವಸಂತಿಗೆ ಮೊದಲಿನಿಂದಲೂ ಆ ಮುದುಕನ ಮೇಲೆ ಅನುಮಾನವಾಗಿಯೇ ಇತ್ತು. ಅವಳು ಆ ಸಂಗತಿಯನ್ನು ಗಂಡನೊಂದಿಗೆ ಹೇಳಿ, "ಅವನು ನಿಮ್ಮವರ ವಿಷಯವನ್ನೆಲ್ಲಾ ಒಂದೊಂದಾಗಿ ಉಪಾಯವಾಗಿ ನನ್ನಿಂದಲೇ ತಿಳಿದುಕೊಂಡು, ನಿಮ್ಮೊಡನೆ ಹೇಳಿ ನಂಬಿಸಿದ್ದಾನೆ" ಎಂದಳು.

"ಆ ಸಂಗತಿ ಮೊದಲೇ ನನಗೇಕೆ ಹೇಳಲಿಲ್ಲ?" ಎಂದು ವೀರೇಶನು ಕೋಪದಿಂದ ಅವಳನ್ನು ನೋಡಿದನು.

"ಇಂಥಾ ನಿಮ್ಮ ಕೋಪದಿಂದಲೇ, ನನ್ನನ್ನು ಬಾಯಿ ತೆರೆಯಲು ಬಿಡುತ್ತೀರಾ ನೀವು? ಅವನ ಮೇಲೆ ಅಪನಂಬುಗೆ ತಾಳಿದರೆ ನಿಮಗೆ ಸಿಟ್ಟು ಬರುತ್ತೇನೋ ಅಂದುಕೊಂಡು ಅವನು ಕೇಳಿದ್ದಕ್ಕೆಲ್ಲಾ ನನಗೆ ತಿಳಿದದ್ದು ಹೇಳಿದೆ. ಕಡೆಗೆ ನನ್ನ ಅನುಮಾನವೇ ನಿಜ ಆಯ್ತು. ಯಾವುದಕ್ಕೂ ಒಳ್ಳೇದು ಅಂತ ನಿಮ್ಮ ಸಂಬಳ ಹಣದ ಚೀಲ ಆ ಪೆಟ್ಟಿಗೆಯಿಂದ ತೆಗೆದು ಅಡಿಗೇ ಮನೇಲಿ ಅಡಗಿಸಿಟ್ಟಿದ್ದೇನೆ." ಎಂದಳು ವಸಂತಿ.

ಈಗ ವಸಂತಿಯ ಮೇಲೆ ವೀರೇಶನಿಗೆ ಒಮ್ಮೆಗೇ ಅಪರಿಮಿತವಾದ ಪ್ರೇಮ ಉಕ್ಕಿತು. ಚಿನ್ನದ

ಉಂಗುರವೊಂದು ಹೋದರೂ ತನಗೆ ಬುದ್ಧಿ ಬಂತೆಂದುಕೊಂಡನು. ಗಂಡನಲ್ಲಿ ಉಂಟಾದ ಮಾರ್ಪಾಟನ್ನು ನೋಡಿ, "ಅಂತೂ ಕಳ್ಳ ಮುದುಕನಿಂದಾಗಿ ಒಳ್ಳೇದೇ ಆಯಿತು" ಎಂದು ಸಂತೋಷಪಟ್ಟಳು ವಸಂತಿ.

ನಾಲ್ಕು ದಿನಗಳ ಮೇಲೆ ಒಬ್ಬ ಹುಡುಗನು ಒಂದು ಚೀಲವನ್ನು ತಂದು ವೀರೇಶನಿಗೆ ಕೊಟ್ಟು, "ಒಬ್ಬರು ಮುದುಕರು ಈ ಚೀಲ ನಿಮಗೆ ಕೊಡಲು ಹೇಳಿದರು" ಎಂದು ಹೇಳಿ ಹೊರಟು ಹೋದನು. ಆ ಚೀಲವನ್ನು ತೆರೆದು ನೋಡಿ ವೀರೇಶನು ಆಶ್ಚರ್ಯಪಟ್ಟನು. ಅದರೊಳಗೆ ಅವನ ಉಂಗುರವೂ ಸ್ವಲ್ಪ ಹಣವೂ, ಒಂದು ಕಾಗದವೂ ಇದ್ದಿತು; ಆ ಕಾಗದದಲ್ಲಿ ಹೀಗೆ ಬರೆಯಲಾಗಿತ್ತು:

"ಅಪ್ಪಾ, ವೀರೇಶಾ! ಗಂಡಹೆಂಡಿರಾದ ನೀವಿಬ್ಬರೂ ನನ್ನನ್ನು ಕಳ್ಳನೆಂದು ಬಯ್ಯುತ್ತಾ ಇರುವಿರಿ. ಈ ಅನುಭವದಿಂದ ನಿನ್ನಲ್ಲಿ ಬದಲಾವಣೆ ಬಂದಿರಬೇಕೆಂದು ನಂಬುತ್ತೇನೆ. ಕೋಪದ ಗಂಡನೊಂದಿಗೆ ಬಾಳುವುದು, ಹೆಂಗುಸರಿಗೆ ಕಷ್ಟವೆಂದು ನನ್ನ ಅನುಭವ ಹೇಳುತ್ತದೆ. ನಾನು ಮಹಾ ಕೋಪಿಷ್ಠನಾಗಿದ್ದು, ನನ್ನ ಹೆಂಡತಿಯನ್ನು ಬಾಯಿ ಎತ್ತಲು ಬಿಡದೆ ಯಾವಾಗಲೂ ಹಿಂಸಿಸಿಕೊಂಡಿದ್ದೆ. ನನ್ನ ಹೆಂಡತಿ ಪಾಪದವಳು. ನನ್ನ ಕೋಪವನ್ನು ತಾಳಿಕೊಂಡೇ ಇದ್ದಳು. ಆದರೆ ಬೇಗನೇ ಸತ್ತಳು. ನನಗೆ ದುರವಸ್ಥೆ ಬಂತು. ನನ್ನ ಕೋಪಕ್ಕೆ ಹೆದರಿ ಇಬ್ಬರು ಮಗಂದಿರೂ ಸೊಸೆಯಂದಿರೂ ನನ್ನನ್ನು ಏಕಾಂಗಿಯಾಗಿ ಮಾಡಿ ಹೊರಟು ಹೋದರು. ಆ ದಿನ ಶ್ರೀನಿವಾಸ ದೇವಾಲಯದ ಸತ್ರದಲ್ಲಿ ನಿನ್ನ ಪಕ್ಕದ ಕೋಣೆಯಲ್ಲೇ ನಾಗಿದ್ದೆನು. ನೀನು ಹೆಂಡತಿಯೊಡನೆ ಕೋಪಿಸುವುದನ್ನೂ ತಿಳಿದೆನು. ನೀನು ನಿಜವಾಗಿಯೂ ಬದಲಾಯಿಸಿದ್ದರೆ ವಸಂತಿಯನ್ನು ಕರೆದುಕೊಂಡು ನನ್ನ ಮನೆಗೆ ಬಾ. ಮಗಂದಿರಿಂದ ಕಡೆಗಣಿಸಲ್ಪಟ್ಟ ನನಗೆ ನೀನು ಮಗನಂಥವನು. ನನ್ನ ವಿಳಾಸ ಇಲ್ಲಿದೆ. ಈ ಹಣದಿಂದ ವಸಂತಿಗೆ ಇಷ್ಟವಾದ ಸೀರೆ ತೆಗೆದು ಕೊಡು."

ಈ ಕಾಗದವನ್ನು ನೋಡಿ ವೀರೇಶನು ಉತ್ಸಾಹದಿಂದ, "ವಸಂತೀ! ಬಾ, ಬಾ. ಬೇಗ ಹೊರಡು!" ಎಂದು ಕೂಗಿದನು. ವಸಂತಿ ಮೆಲ್ಲನೆ ಬಂದು ತಲೆಯಾಡಿಸಿ ಸುಮ್ಮನಿದ್ದಳು,

"ನೀನು ಬಾಯಿ ತೆರೆದ ಕೂಡಲೇ ಬಾಯಿ ಮುಚ್ಚುವಂತೆ ಹೇಳುವ ನನ್ನ ಕೋಪ ನಂದಿಯೇ ಹೋಗಿದೆ. ಈಗ ಎಲ್ಲಿಗೆ ಹೋಗಬೇಕು ಗೊತ್ತೇ? ನಿನ್ನ ಆ ಸಣ್ಣ ಮಾವಯ್ಯನಲ್ಲಿಗೇ! ನೋಡು ಈ ಕಾಗದ!" ಎಂದನು ವೀರೇಶ. ಈಗ ವಸಂತಿಗಾದ ಸಂತೋಷಕ್ಕೆ ಮೇರೆ ಇಲ್ಲದಾಯಿತು.





# ಸಮಯ ಸ್ಫೂರ್ತಿ

ಹಿಂದೆ ವಜ್ರಗಿರಿ ರಾಜ್ಯವನ್ನು ಆಗಾಗ ಇಬ್ಬರು ಕಳ್ಳರು ಕಾಡುತ್ತಾ ಇದ್ದರು. ಅವರಿಬ್ಬರೂ ಚೋರ ಪಂಡಿತನ ಹತ್ತಿರ ಕ್ರಮವಾಗಿ ವಿದ್ಯೆ ಕಲಿತವರು. ಆ ಚೋರ ಪಂಡಿತನು ವೃದ್ಧನಾಗಿ ಸತ್ತು ಹೋಗಿದ್ದನು.

ಅವನ ಆ ಇಬ್ಬರು ಶಿಷ್ಯರಲ್ಲಿ ಧರ್ಮಯ್ಯನು ಬಲುಗಟ್ಟಿಗನಾಗಿದ್ದನು. ಬ್ರಹ್ಮಯ್ಯನೆಂಬವನು ಮಾತ್ರ ಧರ್ಮಯ್ಯನನ್ನೇ ಅನುಸರಿಸಿ, ಅವನು ಮಾಡಿದ ಉಪಾಯಗಳನ್ನೇ ತಾನೂ ಮಾಡುತ್ತ ಚೋರ ವೃತ್ತಿ ನಡೆಸುತ್ತಿದ್ದನು, ಅವರಿಬ್ಬರನ್ನೂ ಹಿಡಿಯಲು ಯಾರಿಗೂ ಸಾಧ್ಯವಾಗಲಿಲ್ಲ.

ಎರಡು ಮೂರು ವರ್ಷಗಳವರೆಗೆ ಅವರಿಬ್ಬರೂ ಒಂದಾಗಿಯೇ ಇದ್ದರು. ಆಮೇಲೆ ಒಂದು ಸಂದರ್ಭದಲ್ಲಿ ಕಳವಿನ ವಸ್ತು ಹಂಚುವಾಗ ತಕರಾರು ಬಂದು ಇಬ್ಬರೂ ಬೇರೆಬೇರೆಯಾದರು.

ಬೇರೆಬೇರೆಯಾದ ಮೇಲೆ ಇಬ್ಬರೂ ತಮ್ಮ ಕಳ್ಳತನವನ್ನು ಮಾಡಿಕೊಂಡೇ ಇದ್ದರು. ಧರ್ಮಯ್ಯ ಒಂದು ಸಾರಿ ಕೂಡಾ ಸಿಕ್ಕಿ ಬೀಳಲಿಲ್ಲ. ಆದರೆ ಅವನ ಸಹಾಯವಿಲ್ಲದ ಬ್ರಹ್ಮಯ್ಯ ಮಾತ್ರ ಅನೇಕ ಸಾರಿ ರಾಜಭಟರ ಕೈಗೆ ಸಿಕ್ಕಿ ಬೀಳುತ್ತಿದ್ದನು. ಕಾರಾಗೃಹ ಶಿಕ್ಷೆ ಅನುಭವಿಸಿ ಹೊರಗೆ ಬರುತ್ತಿದ್ದನು. ಹೀಗೆ ಅನೇಕ ಸಾರಿ ನಡೆಯಿತು.

ಒಂದು ಸಾರಿ ಬ್ರಹ್ಮಯ್ಯ ಸೆರೆಮನೆಯಿಂದ ಬಿಡುಗಡೆ ಪಡೆದು ನೇರಾಗಿ ಧರ್ಮಯ್ಯನ ಬಳಿಗೆ ಹೋಗಿ, "ಅಣ್ಣಾ, ಏನೋ ಜಗಳವಾಡಿದ್ದಕ್ಕೆ ನನ್ನನ್ನು ಕ್ಷಮಿಸು. ನಿನ್ನೊಂದಿಗಿರುವಾಗ ನಾನು ಒಂದು ಸಾರಿ ಕೂಡಾ ರಾಜಭಟರ ಕೈಗೆ ಸಿಕ್ಕಿ ಬೀಳಲಿಲ್ಲ. ಒಬ್ಬನೇ ಆದ ಮೇಲೆ ಆಗಾಗ ಸಿಕ್ಕಿ ಬೀಳುತ್ತಿದ್ದೇನೆ. ನೀನು ಒಬ್ಬನೇ ಆದರೂ ಒಂದು ಸಾರಿ ಕೂಡಾ ಸಿಕ್ಕಿ ಬಿದ್ದವನಲ್ಲ. ಅಷ್ಟೊಂದು ಬುದ್ಧಿವಂತಿಕೆಯಿಂದ ಹೇಗೆ ತಪ್ಪಿಸಿಕೊಳ್ಳುವೆಯೊ ? ಆ ರಹಸ್ಯವನ್ನು ನನಗೂ ಹೇಳಿಬಿಡು. ನಾವಿಬ್ಬರೂ ಒಬ್ಬರೇ ಗುರುವಿನ ಹತ್ತಿರ ಕಲಿತವರು ತಾನೆ ? ಹಾಗೆ ನೋಡಿದರೆ ಮೊದಲು ಗುರುವಿನ ಹತ್ತಿರ ಸೇರಿದವನು ನಾನೇ ; ನಾನು ಸೇರಿ ಮೂರು ವರ್ಷಗಳಾದ ಮೇಲೆಯೇ ನೀನು ಬಂದವನು " ಎಂದನು.

ಆ ಮಾತು ಕೇಳಿ ಧರ್ಮಯ್ಯ ನಕ್ಕು, "ಅದಕ್ಕಾಗಿ ನೀನು ನನ್ನ ಹತ್ತಿರ ಕ್ಷಮೆ ಕೇಳಲಿಕ್ಕೆ ಏನೂ ಇಲ್ಲ.

ಪಿ. ಮೆಹಬೂಬ್ ಖಾನ್

ಬೇರೆಬೇರೆ ಇದ್ದರೇನೆ ಶಕ್ತಿ ಸಾಮರ್ಥ್ಯ ಹೆಚ್ಚಾಗುತ್ತೆ. ಇದರಲ್ಲಿ ರಹಸ್ಯವೇನಿಲ್ಲ. ಸಮಯಕ್ಕೆ ತಕ್ಕ ಹಾಗೆ ಮಾಡುವ ಸಮಯ ಸ್ಫೂರ್ತಿ ಬೇಕು; ಅಷ್ಟೇ" ಎಂದನು ಬ್ರಹ್ಮಯ್ಯ.

"ಹಾಗಂದರೇನು ? ಸ್ವಲ್ಪ ವಿವರಿಸಿ ಹೇಳು" ಎಂದನು ಬ್ರಹ್ಮಯ್ಯ.

"ಗುರುವಿನ ಹತ್ತಿರ ಕನ್ನಕೊರೆಯುವುದು, ಗೋಡೆಯೇರುವುದು ಮೊದಲಾದ ಎಲ್ಲಾ ವಿದ್ಯೆಗಳನ್ನೂ ನಾವಿಬ್ಬರೂ ಸಮಾನವಾಗಿಯೇ ಕಲಿತವರು. ಅಪಜಯ ಹೊಂದಲು ಮುಖ್ಯ ಕಾರಣ ನಿನ್ನಲ್ಲಿ ಸಮಯ ಸ್ಫೂರ್ತಿ ಇಲ್ಲ. ಅದೇನೆಂದು ಗೊತ್ತೇ ಇಲ್ಲವೆನ್ನುತೀ, ಕೇಳು. ನಿನ್ನೆ ರಾತ್ರಿ ನಾನು ಒಂದು ಮನೆಯೊಳಗೆ ಹೊಕ್ಕಿದ್ದೆ. ಕತ್ತಲೆಯಲ್ಲಿ ಕಾಲು ತಗಲಿ ಯಾವುದೋ ವಸ್ತು ಶಬ್ದವಾಯಿತು. ಕೂಡಲೇ ಆ ಮನೆಯವಳಿಗೆ ಎಚ್ಚರವಾಗಿ, ಯಾರದೂ ಎಂದು ಕೂಗಿದಳು. ನಾನು ಬೆಕ್ಕಿನ ಹಾಗೆ 'ಮ್ಯಾಂವ್' ಅಂದೆನು. ಅದನ್ನು ಕೇಳಿ ಅವಳ ಗಂಡ ಕೂಗಿ ತನ್ನ ನಿದ್ದೆ ಕೆಡಿಸಿದ್ದಕ್ಕೆ ಹೆಂಡತಿಯ ಮೇಲೆ ಕೋಪಿಸಿ 'ಗೊತ್ತಾಗಿಲ್ವೇ, ಬೆಕ್ಕು. ಸುಮ್ಮನೆ ಮಲಕ್ಕೋ' ಎಂದನು. ನಾನು ಕೈಗೆ ಸಿಕ್ಕಿದ್ದನ್ನು ಎತ್ತಿಕೊಂಡು ಹೊರಬಿದ್ದೆ. ಸಮಯಸ್ಫೂರ್ತಿ ಅಂದರೆ ಹೀಗೆಯೇ. ಗೊತ್ತಾಯಿತಷ್ಟೆ?" ಎಂದನು ಧರ್ಮಯ್ಯ.

"ಇಷ್ಟೇನಾ ಸಮಯ ಸ್ಫೂರ್ತಿ ಅಂದರೆ? ಈ ವಿಷಯ ಇಷ್ಟು ಕಾಲ ಹೊಳೆಯದೆ ಹೋದುದಕ್ಕೆ ಆಶ್ಚರ್ಯವಾಗುತ್ತದೆ. ಸಮಯವಿದ್ದಾಗ ಬರುತ್ತೇನೆ ಅಣ್ಣಾ" ಎಂದು ಹೇಳಿ ಬ್ರಹ್ಮಯ್ಯ ಅಲ್ಲಿಂದ ಹೊರಟನು.

ಆ ದಿನ ರಾತ್ರಿ ಬ್ರಹ್ಮಯ್ಯ ಒಂದು ಮನೆಗೆ ಕನ್ನ ಕೊರೆದು ಒಳಗೆ ಹೊಕ್ಕನು. ಕತ್ತಲೆಯಲ್ಲಿ ಧನವನ್ನು ಹುಡುಕುತ್ತಾ ಹೋಗುವಾಗ ಕಾಲಿಗೆ ಯಾವುದೋ ಡಬ್ಬಿ ತಗಲಿ ಶಬ್ದವಾಯಿತು.

ಕೂಡಲೇ ಮನೆಯವಳು ಕಣ್ಣು ತೆರೆದು, ಗಂಡನನ್ನು ಎಬ್ಬಿಸುತ್ತ, "ಯಾರದೂ?" ಎಂದಳು.

ಬ್ರಹ್ಮಯ್ಯ ಇದ್ದಲ್ಲೇ ಹೊಂಚಿ ಕುಳಿತು, "ಬೆಕ್ಕು" ಎಂದನು. ಕೂಡಲೇ ಗಂಡ ಹೆಂಡಿರಿಬ್ಬರೂ "ಕಳ್ಳ! ಕಳ್ಳ!" ಎಂದು ಕೂಗಾಡಿದರು. ಅದನ್ನು ಕೇಳಿ ಹೊರಗಿನಿಂದ ಯಾರಾರೋ ಓಡಿ ಬರುವುದೂ ಕೇಳಿಸಿತು.

ಧರ್ಮಯ್ಯ ಹೇಳಿದ ಸಮಯಸ್ಫೂರ್ತಿ ಏಕೆ ತಿರುಗಿ ಹೊಡೆಯಿತೆಂದು ಅರ್ಥವಾಗದೆ ಬ್ರಹ್ಮಯ್ಯ ಕನ್ನದಿಂದ ಹೊರಬಿದ್ದು ಬೀದಿಗೆ ಓಡಿದನು. ಅಷ್ಟರಲ್ಲಿ ಮನೆಯವರ ಕೂಗು ಕೇಳಿ ಓಡಿಬರುವ ನೆರೆಹೊರೆಯವರು ಓಡುವ ಬ್ರಹ್ಮಯ್ಯನನ್ನು ಹಿಡಿದು, ರಾಜಭಟರಿಗೆ ಒಪ್ಪಿಸಿದರು.






ಅದ್ಭುತವಾದ ವಿಘ್ನೇಶ್ವರಾವತಾರದ ಆನಂದ ಸಂಭ್ರಮದಲ್ಲಿದ್ದ ತ್ರಿಮೂರ್ತ್ಯಾದಿ ದೇವತೆಗಳಿಗೆ ಒಂದು ಆಕಾಶವಾಣಿ ಕೇಳಿಸತೊಡಗಿತು :

"ಓ ! ವಿಘ್ನೇಶ್ವರಾ ! ಈಗ ನಿನ್ನಿಂದಾದ ಗಜಾಸುರ ಸಂಹಾರದ ಸ್ಮಾರಕವಾಗಿ ನವರಾತ್ರಿ ಉತ್ಸವಗಳು ಗಣಪತಿ ಪೂಜೆಯಿಂದ ಪ್ರಾರಂಭ ವಾಗಲಿ."

ಈ ದಿವ್ಯಾಶಯದ ವಾಣಿಯನ್ನು ಕೇಳಿ ಎಲ್ಲರೂ "ಹಾಗೇ ಆಗಲಿ ! ಹಾಗೇ ಆಗಲಿ !" ಎನ್ನುತ್ತಾ ಮಾರ್ದನಿ ಕೊಟ್ಟು ತಲೆದೂಗಿದರು.

ವಿಷ್ಣು ವಿಘ್ನೇಶ್ವರನನ್ನು ನೋಡಿ, "ಪಾರ್ವತೀ ನಂದನಾ ! ಸೋದರಳಿಯನೆಂದು ಹೇಳಿ ನನಗೆ ಇನ್ನೊಂದು ಕೆಲಸ ಕಲ್ಪಿಸಿದೆಯಲ್ಲಾ ! ಚೆನ್ನಾಗಿದೆ ನಿನ್ನ ಸಂಬಂಧವರಿಸೆ !" ಎಂದನು.

"ನೀನು ಸೋದರ ಮಾವನ ವರಿಸೆ ಹಿಡಿದು, ಕಾಲನೇಮಿಯಾದ ಕಂಸನನ್ನು, ಸೋದರ ಮಾವನ ಗಂಡಾಂತರ ರೂಪದಲ್ಲಿ ಕೊಲ್ಲಲಿರುವೆಯಷ್ಟೆ ? ಇಂತಹ ಸಂಬಂಧ ವರಿಸೆಗಳೆಲ್ಲ ನೀನು ಕಲಿಸಿದ ವಿದ್ಯೆ ತಾನೇ ನೀರಜಾಕ್ಷಾ ?" ಎಂದನು ವಿಘ್ನೇಶ್ವರ.

"ನಿನ್ನ ಪರಶುವಿನ ಮುಂದೆ ನನ್ನ ಚಕ್ರಾಯುಧ ಹೇಗೆ ನಿಂತೀತು ? ನಿನ್ನ ಕೊಡಲಿಯ ಸಾಧನೆ ನೋಡುವಾಗ ತುಂಬಾ ಮುದ್ದಾಗಿ ಕಾಣುವೆಯೋ ನನ್ನಪ್ಪ !" ಎಂದನು ವಿಷ್ಣು.

"ಓಹೋ ! ಪರಶುರಾಮಾವತಾರದಲ್ಲಿ ನನ್ನ ಕೊಡಲಿ ಬೇಕೆಂದು ಸೂಚಿಸುವೆಯಾ ? ಅಗತ್ಯವಾಗಿ ಕೊಡುತ್ತೇನೆ. ಅದರಿಂದ ಗರ್ವಾಂಧರಾದ ಕ್ಷತ್ರಿಯರ ನ್ನೆಲ್ಲ ಕಡಿದೆಸೆಯುವೆಯಂತೆ" ಎಂದನು ವಿಘ್ನೇಶ್ವರ.

"ಇರಲಿ ! ಕುಳ್ಳನಾದರೂ ಮಹಾದಾತ. ಗುಜ್ಜಾರಿ ರೂಪದ ನೀನು ಗಜ ವಿಘ್ನಾಸುರನ ಮೇಲೆ ಏರಿ ಮರ್ದಿಸುವಾಗ, ನಿನ್ನ ಗುಡುಗುಡು ನಡಿಗೆಯೂ ಕುಣಿತವೂ ನನಗೆ ತುಂಬಾ ಹಿಡಿಸಿತು !" ಎಂದನು ವಿಷ್ಣು.

"ಓ ಹ್ಹೊ ! ಆ ರೂಪವೂ ನಿನಗೆ ಬೇಕನ್ನು. ಸರಿ. ವಾಮನನಾಗಿ ಬಲಿ ಚಕ್ರವರ್ತಿಯನ್ನು



ಪಾತಾಳಕ್ಕೆ ತುಳಿದೊತ್ತಲು ಆ ರೂಪವನ್ನೇ ತೆಗೆದುಕೋ !" ಎಂದನು ವಿಘ್ನೇಶ್ವರ.

"ನಿನ್ನ ಬುದ್ಧಿ ಕೂಡಾ ಏನು ವಿಶೇಷ ! ಎಷ್ಟು ದೊಡ್ಡದು ! ಅದು ನನ್ನನ್ನು ತುಂಬಾ ಆಕರ್ಷಣೆ ಮಾಡಿಕೊಂಡಿದೆ. ಅದಕ್ಕೇನು ಮಾಡಲಿ ?" ಎಂದು ವಿಷ್ಣು ಪ್ರಶ್ನಿಸಿದನು.

"ಅದಕ್ಕೂ ಕಾಲ ಬರುತ್ತದೆ. ಯಾವ ಯುಗಕ್ಕೆ ಅಗತ್ಯವಾದ ಧರ್ಮವನ್ನು ಆ ಯುಗದಲ್ಲಿ ಸ್ಥಾಪಿಸುವುದು ತಾನೇ ನಿನ್ನ ಅವತಾರಗಳಿಗೆ ಮೂಲ ಕಾರಣ ? ಮಾನವ ಸಮಾಜವೆಲ್ಲಾ ಹಿಂಸೆಯಿಂದಲೂ ಮೂಢಾಚಾರಗಳಿಂದಲೂ ಹಾಳಾಗಿ ಹೋಗುವ ದಿನಗಳೂ ಮುಂದೆ ಬರಲಿವೆಯಷ್ಟೆ ? ಆಗ ನೀನು ಬುದ್ಧನಾಗಿ ಮಾನವರಿಗೆ ಧರ್ಮಸಂಸ್ಥಾಪನೆಯ ನಿಜವಾದ ಅರ್ಥವನ್ನು ಬೋಧಿಸುವಿಯಂತೆ. ಮಾಯಾದೇವಿಯ ಸ್ವಪ್ನದಲ್ಲಿ ನನ್ನ ಬಿಳಿಯಾನೆಯ ರೂಪವು ಗರ್ಭದೊಳಗೆ ಪ್ರವೇಶಿಸಿ ನಿನ್ನ ಬುದ್ಧತ್ವಕ್ಕೆ ನಾಂದಿ ಮಾಡಿಸುತ್ತೇನೆ. ತೃಪ್ತಿಯಾಯಿತಷ್ಟೇ ವಿಷ್ಣುಮೂರ್ತೀ ?" ಎಂದನು ವಿಘ್ನೇಶ್ವರ.

ವಿಘ್ನೇಶ್ವರನ ಮಾತಿನಿಂದ ವಿಷ್ಣುವಿಗಾದ ಆನಂದಕ್ಕೆ ಮೇರೆಯೇ ಇಲ್ಲ. ಆಗ ಅಪ್ಪಣೆ ಕೇಳಲು ಸಮಯ ಹೊಂಚಿಕೊಂಡಿದ್ದ ಪರಮಾಣು ರೂಪದ ವಿಘ್ನವು ವಿಘ್ನೇಶ್ವರನ ಮುಂದೆ ಬಂದು ವಿನಯದಿಂದ ಕೈ ಜೋಡಿಸಿ, "ವಿಘ್ನರಾಜಾ, ಎಂದೆಂದೂ ನಾನು ನಿನ್ನ ಅಡಿಯಾಳು. ನಿನ್ನ ಆಜ್ಞಾನುವರ್ತಿ. ಅಪ್ಪಣೆ ಕೊಡು, ಹೋಗುತ್ತೇನೆ" ಎಂದು ಹೊರಟುಹೋಗಿ, ಕಾಳಿಂದೀ ಮಡುವನ್ನು ಸೇರಿ, ಕಾಳೀಯನ ರೂಪದಲ್ಲಿ ಅಡಗಿಕೊಂಡಿತು.

ಮೂಷಿಕಾಸುರನು ಮೂಷಿಕ ರೂಪದಲ್ಲಿ ಬಂದು ಅಡಗಿ ಕುಳಿತು, ವಿಘ್ನಕ್ಕೆ ಬಂದ ಗತಿಯನ್ನು ಆಲೋಚಿಸುತ್ತ ಒಮ್ಮೆಲೇ ನಿಜರೂಪವನ್ನು ತಾಳಿ, ವಿಘ್ನೇಶ್ವರನ ಮುಂದೆ ನಿಂತು ಕರ್ಕಶವಾಗಿ ಸಿಂಹನಾದ ಮಾಡಿದನು.

ವಿಘ್ನೇಶ್ವರನು ಬಲಿಷ್ಠವಾದ ಅವನ ಶರೀರವನ್ನು ನೋಡಿ ಸೊಂಡಿಲಾಡಿಸುತ್ತ ಸಂತೃಪ್ತನಾಗಿ ನಿಂತಿರಲು, ಮೂಷಿಕಾಸುರನು ಗಣೇಶನನ್ನು ಸ್ವಲ್ಪವೂ ಲಕ್ಷ್ಯ ಮಾಡದೆ ವಿಷಮವಾಗಿ ನಗುತ್ತ, "ಹೇಡಿ ವಿಘ್ನವು ನಿನ್ನ ಅಡಿಯಾಳಾಗಿ ಹೋಯಿತೆಂದು ಬೀಗ ಬೇಡ. ನಾನು ನಿನ್ನ ಜನ್ಮವಿರೋಧಿ. ಆನೆಗೆ ಸಿಂಹಸ್ವಪ್ನವೆಂಬ ಮಾತು ನಿನಗೆ ಗೊತ್ತಿರಬೇಕು. ನಾನೀಗ ಸಿಂಹವಾಗಿ ನಿನ್ನ ಕುಂಭಸ್ಥಳವನ್ನೇ ಸೀಳುತ್ತೇನೆ !" ಎಂದು ಸಿಂಹವಾಗಿ ಮಾರ್ಪಟ್ಟು ಗರ್ಜಿಸಿದನು.

ಕೂಡಲೇ ವಿಘ್ನೇಶ್ವರನು ಸಿಂಹಕ್ಕೆ ಕೈ ಮುಗಿದು, "ಓ ಮಹಾ ಸಿಂಹಾ ! ನೀನು ಜಗಜ್ಜನನಿಯ ದಿವ್ಯ ವಾಹನ ! ನಿನ್ನನ್ನು ಗೌರವಿಸಬೇಕಾದುದು ನನ್ನ ಧರ್ಮ !" ಎಂದನು. ಸಿಂಹವು ಮತ್ತೆ ಗರ್ಜಿಸಿ ಹಾರಲು ನೋಡುವಾಗ ವಿಘ್ನೇಶ್ವರನು "ಶಿವಶಿವಾ ! ಶರಭಾ !" ಎಂದು ಸ್ಮರಿಸಿದನು.



ಮರುಕ್ಷಣದಲ್ಲಿ ಸಿಂಹದ ಇದಿರಿನಲ್ಲಿ ಶಿವನ ಶರಭಾವತಾರವು ಘೀಂಕಾರ ಗರ್ಜನೆ ಮಾಡುತ್ತ ನಿಂತಿತು. ಶರಭಕ್ಕೆ ಸಿಂಹದ ಶರೀರವೂ, ಕೇಸರಗಳೂ, ನಖದಂಷ್ಟ್ರಗಳೂ ಇದ್ದುವು. ಆನೆಯ ಸೊಂಡಿಲೂ ಅದಕ್ಕಿತ್ತು. ದಂತಗಳೂ ಭಯಂಕರವಾಗಿದ್ದುವು. ಮಹಾ ಸರ್ಪದಂತಹ ಬಾಲದ ಕೊನೆಯಲ್ಲಿ ಜ್ವಾಲೆಗಳನ್ನು ಕಕ್ಕುವ ಮಕರದ ಮುಖ! ಶರಭದ ಜೂಲು ಅಗ್ನಿ ಶಿಖೆಗಳಂತೆ ಹಾರಾಡುತ್ತಿದ್ದುವು. ಬಾಯಿಯಿಂದ ಗುಪ್ಪು ಗುಪ್ಪಾಗಿ ಬಿಸಿಬಿಸೀ ಹೊಗೆ ಬರುತ್ತಿದ್ದಿತು. ಆ ಶರಭವು ಸೊಂಡಿಲಿನಿಂದ ಸಿಂಹದ ಮುಖವು ಬಾತು ಹೋಗುವ ಹಾಗೆ ಒಂದೇಟು ಕೊಟ್ಟಿತು. ಸಿಂಹವು ಬಾಲ ಮುದುಡಿ ಓಡುವಾಗ ಶರಭಾವತಾರವು ಮಾಯವಾಯಿತು.

ವಿಘ್ನೇಶ್ವರನು ಸೊಂಡಿಲನ್ನು ಒಂದು ಯೋಜನ ದೂರಕ್ಕೆ ಸಾಗಿಸಿ ಸಿಂಹದ ಸೊಂಟ ಹಿಡಿದು ಸುತ್ತಿ ಎತ್ತಿದನು. ಸಿಂಹವು ಕರ್ಕಶವಾಗಿ ಕಿರಿಚುತ್ತಿರಲು, ಅದೇ ಸಮಯದಲ್ಲಿ ಆಕಾಶ ಗಮನ ಮಾಡುತ್ತಿದ್ದ ನಾರದನು 'ಸಾ' ಎಂದು ದೀರ್ಘವಾಗಿ ರಾಗವನ್ನು ಹೊರಡಿಸಿ, ಹಾಗೆಯೇ "ಸಾಮಜವರ ವದನಾ" ಎಂದು ಹಿಂದೋಳ ರಾಗವನ್ನು ಹಿಡಿದು ಹಾಡ ತೊಡಗಿದನು.

ದೇವತೆಗಳು ಆಕಾಶದಲ್ಲಿ ಗುಂಪುಗೂಡಿ ವಿನಾಯಕನನ್ನು ನೋಡುತ್ತಿದ್ದರು. ವಿಷ್ಣು ವಿನಾಯಕನನ್ನು ಪ್ರಶಂಸಿಸುತ್ತ, "ವಿಜಯ ವಿಘ್ನೇಶ್ವರಾ! ನೀನು ಹಿಡಿದ ಈ ಸಿಂಹವನ್ನು ನನಗೆ ಕೊಡು. ಬೆಳೆಯಿಸುತ್ತೇನೆ. ಕೊಡಲಾರೆಯಾ?" ಎಂದನು.

ವಿಘ್ನೇಶ್ವರನು ನಗುತ್ತ "ಬೆಳೆಯಿಸುವೆನೆಂದು ಹೇಳಿ, ಇದರ ತಲೆಯನ್ನೂ ಉಗುರುಗಳನ್ನೂ ತೆಗೆದುಕೊಂಡು ನರಸಿಂಹಾವತಾರ ಎತ್ತಿ ಹಿರಣ್ಯಕಶಿಪುವನ್ನು ಸೀಳಿಬಿಡುವ ಆಲೋಚನೆಯೊ? ಅದೇನೂ ಸಾಧ್ಯವಿಲ್ಲ. ಈ ಮೃಗರಾಜನ ಅಗತ್ಯ ನನಗೇ ಬೇಕಾಗಿದೆ. ನಿನ್ನ ನರಸಿಂಹಾವತಾರವನ್ನು ನೀನೇ ನೋಡಿಕೋ. ಸುಮ್ಮನೆ ನಾನು ಮುಟ್ಟಿದ್ದಕ್ಕೆಲ್ಲಾ ಕಣ್ಣು ಹಾಕಬೇಡ" ಎಂದನು.

ವಿಘ್ನೇಶ್ವರನ ಸೊಂಡಿಲು ಮೂಷಿಕಾಸುರ ಸಿಂಹವನ್ನೆತ್ತಿಕೊಂಡು ಸಾಗಿ ಸಾಗಿ ಮಹಾಶ್ವೇತೆಯ ಮುಂದೆ ಸಿಂಹವನ್ನು ಹಾಕಿ ಮಾಯವಾಗಿ ಹೋಯಿತು. ಅಷ್ಟಾದರೂ ಮೂಷಿಕಾಸುರನಾದ ವಜ್ರದಂತನ ಗರ್ವ ಅಡಗಲಿಲ್ಲ. ಅವನು ಸಿಂಹ ರೂಪ ಬಿಟ್ಟು ನಿಜರೂಪದಲ್ಲಿ ನಿಂತು ಮತ್ತೆ ವಿಘ್ನೇಶ್ವರನ ಮೇಲೆ ಢೀಕೊಡಲು ಓಡತೊಡಗಿದನು.

ಮಹಾಶ್ವೇತೆ ಬೇರೆ ಉಪಾಯ ಗಾಣದೆ ದೇವಿಯನ್ನು ಪ್ರಾರ್ಥಿಸತೊಡಗಿದಳು. ದೇವಿ ಅವಳ ಮುಂದೆ ಪ್ರತ್ಯಕ್ಷಳಾಗಿ, "ಹೆದರಬೇಡ. ನಿನ್ನ ಗಂಡನು ಪೂರ್ತಿ ಗರ್ವವನ್ನು ಬಿಟ್ಟು, ವಿಘ್ನೇಶ್ವರನಿಗೆ ಮೂಷಿಕ ರೂಪದ ವಾಹನವಾಗುವನು. ನೀನು ಕೂಡ ಶ್ವೇತಛತ್ರವಾಗಿ ವಿಘ್ನೇಶ್ವರನ



ಸೇವೆಯಲ್ಲಿ ಚಿರಂಜೀವಿಯಾಗಿರುವಿ" ಎಂದು ಹೇಳಿ ಸಂತೋಷಪಡಿಸಿ ಅಂತರ್ಧಾನಳಾದಳು.

ವಜ್ರದಂತನು ಕಾಮರೂಪಿಯಾದುದರಿಂದ ಈಸಾರಿ ಆನೆಗಳನ್ನು ಎತ್ತಿಕೊಂಡು ಹೋಗುವಂತಹ ಗಂಡಭೇರುಂಡ ಪಕ್ಷಿಯ ರೂಪದಲ್ಲಿ ಬರುತ್ತ ದಾರಿಯಲ್ಲಿ ಕಂಡ ಎರಡು ಆನೆಗಳನ್ನು ಒಂದೊಂದು ಕಾಲಿನ ಬೆರಳುಗಳಲ್ಲಿ ಹಿಡಿದು ಹಾರತೊಡಗಿದನು. ಆಗ ಅವನ ರೆಕ್ಕೆಗಳಿಂದೆದ್ದ ಬಿರುಗಾಳಿಯ ವೇಗಕ್ಕೆ, ಸಣ್ಣ ಹದ್ದಿನ ರೂಪದಲ್ಲಿ ಮರದ ಮೇಲೆ ಕುಳಿತು ಹರಿಯನ್ನು ಧ್ಯಾನಿಸುತ್ತಿದ್ದ ಗರುತ್ಮಂತನಿಗೆ ಧ್ಯಾನ ಭಂಗವಾಯಿತು. ಕೂಡಲೇ ಕೋಪಗೊಂಡ ಗರುತ್ಮಂತನು ಗಂಡಭೇರುಂಡವನ್ನು ಕೊಕ್ಕಿನಿಂದ ತಿವಿಯಲು ಆ ತಿವಿತದಿಂದ ನಿರ್ವಿಣ್ಣನಾದ ವಜ್ರದಂತನು ನಿಜರೂಪದಿಂದ ನೆಲಕ್ಕೆ ಬಿದ್ದನು.

"ಇದಕ್ಕಿಂತಲೂ ಮೇಲಾದ ತಿವಿತದ ತಿಂಡಿ ಕೈಲಾಸದಲ್ಲಿ ಕಾದಿದೆ. ಹೋಗತ್ತ!" ಎಂದು ಗರುತ್ಮಂತನು ವಜ್ರದಂತನನ್ನು ಜಾಡಿಸಿ ಒದ್ದು, ತನ್ನ ಪಾಡಿಗೆ ಹಾರಿಹೋದನು.

ಮೂಷಿಕಾಸುರನು ವಿಘ್ನೇಶ್ವರನ ಬಳಿಗೆ ಹೋಗಿ, "ನಿನಗೂ ದೊಡ್ಡದೊಡ್ಡ ದಂತಗಳಿವೆ. ಕಡಲೇ ಉಸುಳಿಯನ್ನು ತಿನ್ನುವುದಕ್ಕೆ ಹೊರತು ಮತ್ತಾವುದಕ್ಕೂ ಉಪಯೋಗವಿಲ್ಲ. ನನ್ನ ದಂತಗಳಿಂದ ಕೈಲಾಸವನ್ನು ಪುಡಿ ಮಾಡುತ್ತೇನೆ. ಸಾಧ್ಯವಿದ್ದರೆ ಪ್ರತ್ಯಕ್ಷ ಪ್ರತಾಪ ತೋರಿಸು!" ಎಂದನು.

ವಿನಾಯಕನು ನಾಲ್ಕು ದಿಕ್ಕುಗಳನ್ನೂ ನೋಡುತ್ತ ತನ್ನೊಳಗೆ ತಾನೇ ಗೊಣಗುಟ್ಟುವವನಂತೆ, "ಹೌದೌದು. ಯಾವುದಕ್ಕೂ ಉಪಯೋಗವಿಲ್ಲದ ಈ ದಂತಗಳಿಂದ ಏನು ಪ್ರಯೋಜನ?" ಎನ್ನುತ್ತ ಒಂದು ದಂತವನ್ನು ಪಟ್ಟಕ್ಕನೆ ಮುರಿದು ಎತ್ತಿ ಆಕಾಶದಲ್ಲಿ ಬಿಸುಟನು.

ಆ ದಂತವು ಗಾಳಿಯಲ್ಲಿ ಇಂದ್ರಜಾಲ ಪ್ರದರ್ಶಕವಾಗಿ, ಮೇಲೆ ಕೆಳಗೆ ಹಾರುತ್ತ, ವಜ್ರದಂತನನ್ನು ಚುಚ್ಚುತ್ತ ತಿವಿಯುತ್ತ ಆಟ ತೋರಿಸಲು ತೊಡಗಿತು. ಅವನ ಶರೀರದಿಂದ ರಕ್ತವು ಧಾರೆ ಧಾರೆಯಾಗಿ ಇಳಿಯಲು ತೊಡಗಿತು. ಮಹಾಶ್ವೇತೆ ಅದನ್ನು ನೋಡಲಾಗದೆ ಮೂರ್ಛೆ ಹೋಗಿಬಿದ್ದಳು. ವಜ್ರದಂತನು ಚಿಕ್ಕ ಇಲಿಯಾಗಿ ಬದಲಾಯಿಸಿ ತುರ್ರನೆ ಓಡುತ್ತ ಕಲ್ಲುಗಳ ನಡುವೆ ಬಿಲ ಮಾಡಿಕೊಂಡು ಒಳಗೆ ತೂರಿದನು. ಒಂದು ದಂತವನ್ನು ಮುರಿದುಕೊಂಡ ವಿಘ್ನೇಶ್ವರನು ಏಕದಂತನೆನಿಸಿದನು.

ಆ ದಂತದ ತುಂಡು ಅಷ್ಟಕ್ಕೆ ಬಿಡಲಿಲ್ಲ. ಬಿಲದೊಳಗೆ ತೂರಿ ಇಲಿಯನ್ನು ತಿವಿದುಕೊಂಡೇ, ಇಲಿ ಮುಂದೆ ಮುಂದೆ ಹೋದ ಹಾಗೆ ದಂತದ ತುಂಡೂ ಹೋಯಿತು. ಇಲಿಯ ಬಾಲದ ಹಿಂದೆ ರಕ್ತಧಾರೆಯ ಗೆರೆ ಹೋಗುತ್ತಿತ್ತು. ಇಲಿ ಸುರಂಗ ತೋಡುತ್ತಾ ಪಾತಾಳದ ವರೆಗೂ ಹೋಯಿತು. ಪಾತಾಳದಿಂದ ಭೂಮಿಯ ಮೇಲೆ ಬಂತು. ಮತ್ತೆ



ಓಡುತ್ತಾ ಲೋಕವನ್ನೆಲ್ಲಾ ಪ್ರದಕ್ಷಿಣೆ ಮಾಡಿ ಕಡೆಗೆ ವಿಘ್ನೇಶ್ವರನ ಪಾದಗಳ ಬಳಿ ಬಿದ್ದುರುಳುತ್ತ, "ನನಗೆ ಸಾವು ಬರುವುದಿಲ್ಲ. ನಿನ್ನ ದಂತವು ನನ್ನನ್ನು ಬಿಡದೆ ಚುಚ್ಚುತ್ತಾ ಇದೆ. ಈ ಕಾಟ ತಾಳಲಾರೆ ! ಕಾಪಾಡು ದೇವಾ !" ಎಂದು ಪೂರ್ತಿ ಗರ್ವವಳಿದು ಮೊರೆಯಿಡುವ ಮೂಷಿಕಾಸುರನ ಮೇಲೆ ವಿಘ್ನೇಶ್ವರನಿಗೆ ಕರುಣೆಯುಂಟಾಯಿತು. ಕೂಡಲೇ ದಂತದ ತುಂಡು ಅವನ ಅಭಯಹಸ್ತವನ್ನು ಅಲಂಕರಿಸಿತು.

ವಿಘ್ನೇಶ್ವರನು ಇಲಿಯನ್ನು ನೋಡಿ, "ಎಲೋ ಮೂಷಿಕಾ ! ಸಣ್ಣ ಇಲಿಯಾಗಿದ್ದರೂ ಮಹಾ ಬಲಿಷ್ಠನಾಗಿರುವಿ. ವಿಷ್ಣು ಕೂರ್ಮಾವತಾರದಿಂದ ಮಂದರ ಪರ್ವತವನ್ನೂ, ಆದಿವರಾಹಾವತಾರದಿಂದ ಭೂಮಿಯನ್ನೂ ಎತ್ತಿದ್ದಾನೆ. ನೀನು ಅವನಿಗಿಂತ ಹೆಚ್ಚಿನ ಬಲಿಷ್ಠನು. ತಕ್ಕ ವಾಹನವಿಲ್ಲದೆ ಈ ಲಂಬೋದರವನ್ನು ಹೊತ್ತುಕೊಂಡು ನಡೆಯಲಾಗದೆ ಕಷ್ಟಪಡುತ್ತಿದ್ದೇನೆ. ನಿನ್ನಂತಹ..." ಎಂದು ಮುಂದೆ ಹೇಳಲು ಸಂದೇಹಪಟ್ಟನು.

ವಿಘ್ನೇಶ್ವರನ ಸ್ತುತಿ ಪಾಠದಿಂದ ಮೂಷಿಕಾಸುರನು ತುಂಬಾ ಉಬ್ಬಿ, "ಸ್ವಾಮಿ, ನಿನ್ನ ದಂತವು. ನನ್ನೊಳಗೆ ತುಂಬಿದ್ದ ಅಜ್ಞಾನವನ್ನು ಚುಚ್ಚಿ ಚುಚ್ಚಿ ಕಿತ್ತು ಹೊರಗೆ ಹಾಕಿ ಜ್ಞಾನವನ್ನು ತುಂಬಿತು. ನನಗೆ ಚಿಕಿತ್ಸೆ ಮಾಡಿತು. ನಾನು ನಿನ್ನ ವಾಹನವಾಗುವುದಾದರೆ ನನ್ನ ಭಾಗ್ಯವೆಂದೇ ಭಾವಿಸುತ್ತೇನೆ. ನಿನಗಾಗಿ ಎಷ್ಟು ದೊಡ್ಡ ವಾಹನವಾಗಿಯೂ ಬೆಳೆಯಬಲ್ಲೆ" ಎಂದು ಆನೆಯಷ್ಟು ದೊಡ್ಡ ಇಲಿಯಾಗಿ ಬೆಳೆದು ನಿಂತನು.

ವಿಘ್ನೇಶ್ವರನು ಅದರ ಮೇಲೆ ಕಾಲುಗಳನ್ನು ಏರಿಸಿ ಕುಳಿತುಕೊಳ್ಳಲು ನೋಡುವಾಗ ಮಹಾ ಮೂಷಿಕವು ಕೀಚುಕೀಚು ಅನ್ನುತ್ತ ಸಣ್ಣ ಇಲಿಯಾಗಿ ಇಳಿಯಿತು. ವಿಘ್ನೇಶ್ವರನು "ಅಪ್ಪಾ ಮೂಷಿಕಾ, ನೀನು ಸಣ್ಣ ಇಲಿಯಾಗಿದ್ದರೇನೇ ನನ್ನನ್ನು ಸುನಾಯಾಸವಾಗಿ ಹೊರಬಲ್ಲೆ. ನನ್ನ ಆಕಾರಕ್ಕೆ ಸಣ್ಣ ಇಲಿಯ ವಾಹನವೇ ಎಲ್ಲಾ ವಿಧದಲ್ಲಿಯೂ ತಕ್ಕುದಾಗಿದೆ." ಎಂದನು. ಮೂಷಿಕಾಸುರನು ಸಣ್ಣ ಇಲಿಯ ರೂಪದಲ್ಲೇ ವಿಘ್ನೇಶ್ವರನನ್ನು ಏರಿಸಿಕೊಂಡು, ಸರಸರನೆ ಸುತ್ತಲೂ ತಿರುಗುತ್ತ, "ಹೌದು ಸ್ವಾಮಿ, ಹೌದು, ಈಗ ನಿನ್ನನ್ನು ಹೊತ್ತಿರುವಂತೆ ಅನಿಸುವುದೇ ಇಲ್ಲ !" ಎಂದನು.

ಇಷ್ಟಾಗುವಾಗ ಮೂರ್ಛೆಯಿಂದ ತನ್ನಂತೆ ಎಚ್ಚರಕ್ಕೆ ಬಂದ ಧವಳೆ ವಿಘ್ನೇಶ್ವರನಿಗೆ ನಮಸ್ಕಾರ ಮಾಡಿ, "ನನ್ನ ಗಂಡ ನಿನಗೆ ವಾಹನವಾಗಿ ಇಲಿಯ ರೂಪದಲ್ಲೇ ಇರುತ್ತಾನೆ. ನಾನು ಕೂಡಾ ನಿನಗೆ ಶ್ವೇತಛತ್ರವಾಗಿ ನೆರಳಿನ ಸೇವೆ ಮಾಡುತ್ತೇನೆ. ಇದು ದೇವಿಯ ಆಜ್ಞೆ. ಅನುಗ್ರಹಿಸು" ಎಂದಳು. "ಅಮ್ಮಾ ! ಬಹಳ ಸಂತೋಷ. ನಿನ್ನ ಬಿಳೀ ಕೊಡೆಯ ತಣ್ಣಗಿನ ನೆರಳು ನನಗೆ ರಕ್ಷೆಯೇ



ಹೌದು. ಇದು ನನಗೆ ಬಂದ ಪರಮ ಭಾಗ್ಯ !" ಎಂದು ಹೇಳಿ ಇಲಿಯನ್ನು ನೋಡಿ, "ಕೇಳಿದೆಯಾ ವಜ್ರದಂತಾ ! ದೇವಿಯ ಅನುಗ್ರಹ ಪಡೆದ ಧವಳೆಯ ಮಾತಿಗೆ ಬೇರೆ ಮಾತಿಲ್ಲ. ಇನ್ನೇನೂ ಸಂದೇಹಿಸಬೇಡ. ನನ್ನ ವಾಹನವಾಗಿ ನನ್ನ ಹತ್ತಿರವೇ ಇರು. ನನ್ನೊಂದಿಗೆ ನನಗೆ ಸಿಗುವುದನ್ನು ನೀನೂ ತಿನ್ನು. ನಿನಗೂ ಕಣ್ಣಿಗೆ ಹಬ್ಬವಾಗಿ ದೇವತಾದಿಗಳಿಂದ ಹಿಡಿದು ಎಲ್ಲರೂ ಗಲ್ಲ ಬಡಿದು ಕೊಂಡು ಮೂರು ಮೂರು ಸಾರಿ ಮುಂಡುಗಾಲೂರಿ ನಮಸ್ಕರಿಸುತ್ತಾರೆ. ಅದು ನಿನಗಲ್ಲವೆಂಬುದನ್ನು ಮಾತ್ರ ನೆನಪಿಟ್ಟುಕೊಂಡರೆ ನಿನಗೂ ಆ ಗೌರವ ಸಂದ ಹಾಗೆಯೇ ! ಗರ್ವಿಷ್ಠನಾಗದಿರು ಕಂಡೆಯಾ !" ಎಂದನು.

"ಗೊತ್ತಾಯಿತು ದೇವಾ ! ನನ್ನ ಬಹು ದಿನಗಳ ಆಶೆ ಕೈಗೂಡಿದಂತಾಗಿದೆ. ನಾನು ವಜ್ರದಂತನಾಗಿದ್ದಾಗ ನನ್ನ ಮುಂದೆ ದೇವತೆಗಳಿಂದ ಹೀಗೆಲ್ಲಾ ಮಾಡಿಸಿಕೊಳ್ಳುತ್ತಿದ್ದೆ. ನಿನ್ನ ವಾಹನವಾಗಿ ಅದೀಗ ವರವಾಗಿ ಪರಿಣಮಿಸಿ, ನನ್ನ ನಿಗರ್ವ ಸ್ಥಿತಿಯಲ್ಲಿ ಮುಂದುವರಿಯುವಂತಾಯಿತು. ಕೃತಾರ್ಥನಾದೆನು" ಎಂದನು ಮೂಷಿಕಾಸುರ.

ಧವಳೆ ಎಂಬ ನಾಮಾಂತರವುಳ್ಳ ಮಹಾಶ್ವೇತೆ ಬಿಳಿಯ ಕೊಡೆಯ ರೂಪತಾಳಿ ವಿಘ್ನೇಶ್ವರನ ಹಿಂದೆ ನಿಂತಳು. ಆ ದಂಪತಿಗಳು ಚಿರಂಜೀವಿಗಳಾಗಿ, ವಿನಾಯಕನನ್ನು ಹಾಗೆಯೇ ಸೇವಿಸಿಕೊಂಡಿರುವರು. ಮೂಷಿಕವಾಹನವಿಲ್ಲದ ವಿಘ್ನೇಶ್ವರನನ್ನು ಯಾರೂ ನೋಡದಂತಾಯಿತು.

ಆಗ ವಿಷ್ಣು ವಿಘ್ನೇಶ್ವರನ ಬಳಿಗೆ ಬಂದು, "ಎಲೋ ವಿಕದಂತಾ ! ಮೂಷಿಕೋತ್ತಮ ವಾಹನಾ ! ನಿನ್ನ ವಾಹನವನ್ನು ನೋಡಿದರೆ ನನಗೆ ಅಸೂಯೆಯಾಗುತ್ತದೆ. ಎಷ್ಟು ಒಳ್ಳೆಯ ವಾಹನವನ್ನು ಸಂಪಾದಿಸಿ ಬಿಟ್ಟೆಯಲ್ಲ !" ಎಂದು ಶ್ಲಾಘಿಸಿದನು.

"ನಿನ್ನ ಕಲ್ಕಿ ಅವತಾರದಲ್ಲಿ ನನ್ನ ವಾಹನವನ್ನು ನಿನಗೆ ಕೊಡುವೆನು. ಅದು ಬಿಳಿಯ ಕುದುರೆಯಾಗಿ, ನಿನ್ನನ್ನು ಅಂತರಿಕ್ಷವನ್ನು ದಾಟಿಸಿ, ಗ್ರಹಾಂತರಗಳಿಗೆ ಕೂಡಾ ಒಯ್ಯುತ್ತದೆ. ಮಿತಿಮೀರಿ ಹೋಗುವ ಮಾನವರಿಗೆ ಹೊಸ ಹೊಸ ವಲಸೆ ರಾಜ್ಯಗಳನ್ನು ಹೊಂದಿಸಿಕೊಡುವೆಯಂತೆ" ಎಂದನು ವಿಘ್ನೇಶ್ವರ.

"ನಿನ್ನ ಬಾಯಿಯಿಂದ ಹೊರಟ ಮಾತು ಸುಳ್ಳಾಗಲಾರದು" ಎಂದು ವಿಷ್ಣು ಸಂತೋಷಪಟ್ಟನು. ಆಗ ನಾರದನು ಬಂದು, "ಹೇ ವಿಜಯ ವಿಘ್ನೇಶ್ವರಾ ! ಇಷ್ಟರ ವರೆಗೆ ನಿನ್ನೊಂದಿಗೆ ವಿಷ್ಣುವಿನ ಒಂಬತ್ತು ಅವತಾರಗಳೂ ತಿಳಿದು ಬಂದುವು. ಒಂದೇ ಉಳಿದಿದೆ" ಎಂದನು.

ವಿಷ್ಣು ನಾರದನನು ನೋಡಿ ಕಣ್ಣು ಕಿಸಿದು, "ಬೇಗದಲ್ಲೇ ಆ ಕಲ್ಯಾಣ ಘಳಿಗೆ ಬಂದಾಗ ಅದೂ ತಿಳಿಯುತ್ತದೆ. ಅವಸರವೇಕೆ ?" ಎಂದನು.

"ಯಾರ ಕಲ್ಯಾಣದೇವಾ ?" ಎಂದು ನಾರದನು ಕೇಳಿದನು. "ನಮ್ಮ ಕಲ್ಯಾಣ ಚಕ್ರವರ್ತಿಯಾದ ವಿಜಯ ವಿಘ್ನೇಶ್ವರನದೇ" ಎಂದನು ವಿಷ್ಣು.

ಆಗ ವಿಘ್ನೇಶ್ವರನು ಕಿರುಗೋಪದಿಂದ ವಿಷ್ಣುವನ್ನು ನೋಡುತ್ತ, "ಹುಂ. ಸಾವಿರ ವಿಘ್ನಗಳನ್ನು ಉಂಟುಮಾಡಲೇ ಬೇಕಾಯಿತು !" ಎಂದು ತನಗೆ ತಾನೇ ಗಟ್ಟಿಯಾಗಿ ಗೊಣಗಿದನು.

"ಸಾವಿರಕ್ಕೆ ನಿಲ್ಲಿಸಿಬಿಡಪ್ಪಾ ! ಸಾವಿರ ವಿಘ್ನಗಳು ಪೂರ್ತಿಯಾದ ಮೇಲೆ ಅರ್ಧ ವಿಘ್ನವನ್ನು ಕೂಡಾ ಹುಟ್ಟಿಸಬೇಡ. ನೆನಪಿರಲಿ !" ಎಂದನು ವಿಷ್ಣು ಎಚ್ಚರಿಸುವ ಧೋರಣೆಯಲ್ಲಿ.

ನಾರದನು, "ಸಾವಿರ ವಿಘ್ನಗಳು ತಾನೇ ? ಅದೇನೂ ದೊಡ್ಡದಲ್ಲ. ಸಾವಿರ ವಿಘ್ನಗಳು ಬಂದು ಹೋದ ಮೇಲೆ ವಿಘ್ನೇಶ್ವರನ ಕಲ್ಯಾಣ ಖಂಡಿತವಾಗಿ ಆಗುತ್ತದೆ" ಎಂದು "ಸರಿಮಾಂಗರಿ" ಬಾರಿಸುತ್ತಾ ಹಾಡುತ್ತಾ ನಾರದನು ಲೋಕಸಂಚಾರಕ್ಕೆ ಹೊರಟನು.

ಶಿವನಿಗೆ ಪಾರ್ವತಿಯು ಮೇಲಿನ ಮೋಹಾನುರಾಗಗಳೆಲ್ಲ ಒಂದಾಗಿ ದಿವ್ಯತೇಜಸ್ಸಾಗಿ ಮಾರ್ಪಟ್ಟಿತು. ಅಗ್ನಿದೇವನು ಅದನ್ನು ಒಯ್ದು ಶರವಣ ಸರೋವರದಲ್ಲಿ ಸೇರಿಸಿಬಿಟ್ಟನು. ಅದು ತೀರವನ್ನು ಸೇರಿ, ಅಲ್ಲಿ ಆರು ಮುಖಗಳ ಕಿರು ಬಾಲನು ಅವತರಿಸಿದನು. ಋಷಿಗಳು ಅವನಿಗೆ ಕುಮಾರಸ್ವಾಮಿ ಎಂದು ನಾಮಕರಣ ಮಾಡಿದರು. ಆರು ಮಂದಿ ಋಷಿಪತ್ನಿಯರು ಹಾಲೂಡಿ ಬೆಳೆಸುತ್ತ, ಆಮೇಲೆ ಪಾರ್ವತೀ ಪರಮೇಶ್ವರರಿಗೆ ಒಪ್ಪಿಸಿದರು. ಕುಮಾರಸ್ವಾಮಿ ದೊಡ್ಡವನಾದ ಮೇಲೆ ಗರುತ್ಮಂತನು ನವಿಲನ್ನು ಅವನಿಗೆ ವಾಹನವಾಗಿ ಕೊಟ್ಟನು. ಇಂದ್ರನು ಅವನಿಗೆ ಅನೇಕ ಆಯುಧಗಳನ್ನು ಕೊಟ್ಟನು. ಪಾರ್ವತಿ ಶೂಲದಲ್ಲಿ ಶಕ್ತಿಯನ್ನಿರಿಸಿ ಅವನಿಗೆ ಕೊಟ್ಟಳು. ಇದೆಲ್ಲಾ ತಾರಕಾಸುರನಿಗೆ ತಿಳಿಯಿತು. ತಾನು ಯಾರು ಅವತರಿಸಬಾರದೆಂದು ಮಾಡಬಾರದ ಪ್ರಯತ್ನಗಳನ್ನೆಲ್ಲ ಮಾಡಿದನೋ ಅಂಥವನೇ ಹುಟ್ಟಿದುದನ್ನು ತಿಳಿದು ತಾರಕಾಸುರನು ಭಯಕಂಪಿತನಾಗಿ, ಕೆಟ್ಟ ಕೆಟ್ಟ ಸ್ವಪ್ನಗಳನ್ನು ಕಾಣತೊಡಗಿದನು.

ಕುಮಾರಸ್ವಾಮಿ ದೊಡ್ಡ ತಪಸ್ಸು ಮಾಡಿ ಬ್ರಹ್ಮಜ್ಞಾನವನ್ನು ಪಡೆದು, ಓಂಕಾರದ ನಿಗೂಢ ರಹಸ್ಯಗಳನ್ನು ಸಾಕ್ಷಾತ್ ಶಿವನಿಗೆ ಗುರುವಾಗಿ ಉಪದೇಶಿಸಿ ಸ್ವಾಮಿನಾಥನೆನಿಸಿದನು. ಅಂಥವನಿಗೆ ಅಗ್ರಜನಾದ ವಿಘ್ನೇಶ್ವರನು ತನ್ನ ತಮ್ಮನೊಂದಿಗೆ ಶಿವ ಪಾರ್ವತಿಯರ ಕಣ್ಮನ ರಂಜಕನಾದನು. ಈ ಅಣ್ಣ ತಮ್ಮಂದಿರ ಲೀಲಾವಿಲಾಸಗಳಿಂದ ಕೈಲಾಸವು ಕಳೆಗೊಂಡು ಬೆಳಗುತಿದ್ದಿತು.





# ಇಬ್ಬರು ಮೋಸಗಾತಿಯರು

೬

ದಿಲ್ಲೈಲಾ ಜೀನಾಬ್ ಎಂಬ ತಾಯಿ ಮಗಳಂದಿರ ಮೋಸಗಳ ಪರಂಪರೆ ನಡೆದ ಸ್ವಲ್ಪ ಕಾಲದ ಮೇಲೆ ಕೈರೋ ನಗರದಿಂದ "ಪಾದರಸ" ಎಂಬ ಸಾರ್ಥಕವಾದ ನಾಮಾಂತರ ಪಡೆದ ಯುವಕನೊಬ್ಬ ಬಾಗ್ದಾದ್ ನಗರಕ್ಕೆ ಬಂದು ಸೇರಿದನು. ಅಲೀ ಎಂಬುದು ಅವನ ನಿಜವಾದ ಹೆಸರು. ಅವನು ಬಹಳ ಸುಂದರ ಪುರುಷನಾಗಿದ್ದರೂ ಚೋರಾಗ್ರೇಸರ. ಕೈರೋ ಅವನ ಸ್ವಂತ ಸ್ಥಳವಾಗಿತ್ತು. ಈಗ ಬಾಗ್ದಾದಿನಲ್ಲಿ ಕೋತ್ವಾಲನಾಗಿ ಅಧಿಕಾರ ಪಡೆದ ಅಹ್ಮದನು, ಹಿಂದೆ ಕೈರೋದಲ್ಲಿ ಪ್ರಚಂಡ ಚೋರನಾಗಿದ್ದಾಗ, ಈ ಪಾದರಸನು ಅವನ ಹತ್ತಿರ ಚೋರವಿದ್ಯೆ ಕಲಿತಿದ್ದ. ಅಹ್ಮದ್ ಬಾಗ್ದಾದಿಗೆ ಬಂದು ಭಾರಿ ದೊಡ್ಡ ಕಳ್ಳನೆಂದು ಕೀರ್ತಿ ಸಂಪಾದಿಸಿ ಕೊಂಡ ಮೇಲೆ, ಖಲೀಫನಿಂದ ಕೋತ್ವಾಲ ಪದವಿಯನ್ನು ಪಡೆದನು. ಆಗ ಕೈರೋದಲ್ಲಿ ಪಾದರಸನು ಅಲ್ಲಿಯ ಕಳ್ಳರಿಗೆಲ್ಲ ನಾಯಕನಾಗಿದ್ದನು. ಅವನು ಅನೇಕ ಸಾರಿ ಸಿಕ್ಕಿಬಿದ್ದರೂ, ತಪ್ಪಿಸಿಕೊಂಡು ಹೋದುದರಿಂದ ಜನರೆಲ್ಲಾ ಅವನನ್ನು "ಕಳ್ಳಪಾದರಸ" ಅನ್ನುತ್ತಿದ್ದರು.

ಅಲೀ ಪಾದರಸನನ್ನು ಅಹ್ಮದನೇ ಬಾಗ್ದಾದಿಗೆ ಬರಲು ಹೇಳಿದ್ದನು. ದಿಲ್ಲೈಲಾಳನ್ನು ಹಿಡಿಯಲಿಕ್ಕಾಗದೆ ಪರಾಭವವನ್ನು ಅನುಭವಿಸಿದಂದಿನಿಂದಲೂ ಅಹ್ಮದನಿಗೆ ಪ್ರತಿಕ್ಷಣಕ್ಕೂ ಪಾದರಸನ ನೆನಪು ಬರತೊಡಗಿತು. ಅವನು ತನಗೆ ಬಲಭುಜದ ಹಾಗಿನವನು. ಅವನು ತನ್ನೊಂದಿಗಿರುತ್ತಿದ್ದರೆ ತನಗೆ ಇಂತಹ ಪರಾಜಯವು ಬರುತ್ತಿದ್ದಿಲ್ಲವೆಂದು ಅವನಿಗೆ ತೋರುತ್ತಿತ್ತು. ಅದೂ ಅಲ್ಲದೆ ಈಗ ಎಲ್ಲಾ ಬಟ್ಟ ಬಯಲಾಗಿ ಹೋದುದರಿಂದ ಅಹ್ಮದನು ದಿಲ್ಲೈಲಾಳ ಮೇಲೆ ಸ್ವಂತವಾಗಿ ಹಗೆ ತೀರಿಸಿಕೊಳ್ಳಲು ಸಾಧ್ಯವಿಲ್ಲ. ಈಗ ಅವಳಿಗೆ ತನಗಿರುವಂತಹ ಪದವಿಯ ಮಹತ್ವವೇ ಬಂದಿದೆ. ಆದ್ದರಿಂದ ಈ ಕಾರ್ಯಕ್ಕೆ ಪಾದರಸನೇ ಸರಿಯಾದವನು.

ಅಲೀ ಪಾದರಸನು ತನ್ನ ಗುರು ಅಹ್ಮದನ ಆಹ್ವಾನದಂತೆ ನೇರಾಗಿ ಅಹ್ಮದನ ಮನೆಗೇ ಬಂದುಬಿಟ್ಟನು. ಅವನನ್ನು ನೋಡಿದ ಕೂಡಲೇ ಅಹ್ಮದನಿಗೆ ಮುದುಡಿದ ಜೀವಕ್ಕೆ ನೀರೆರೆದಂತಾಯಿತು. "ತಮ್ಮಾ, ನೀನು ನನ್ನ ಮನೆಯಲ್ಲಿ ಕೆಲವು ದಿನ ರಹಸ್ಯವಾಗಿ



ಇದ್ದುಬಿಡು. ನಿನ್ನಿಂದ ಒಂದು ಕೆಲಸವಾಗ ಬೇಕಾಗಿದೆ. ಆ ಕೆಲಸ ಮುಗಿದ ಮೇಲೆ ನಿನ್ನನ್ನು ಖಲೀಫರ ಬಳಿಗೆ ಬಹಿರಂಗವಾಗಿ ಕರೆದುಕೊಂಡು ಹೋಗಿ ಶಿಫಾರಸು ಮಾಡಿ ಒಳ್ಳೆಯ ಸಂಬಳವಿರುವ ಉದ್ಯೋಗ ಕೊಡಿಸುತ್ತೇನೆ. ದೊಡ್ಡ ಮನುಷ್ಯನಾಗಿ ಬಾಳಬಹುದು" ಎಂದನು ಪಾದರಸನೊಂದಿಗೆ ಅಹ್ಮದ್. ಆದರಂತೆ ಪಾದರಸನು ಅಹ್ಮದನ ಮನೆಯೊಳಗೆ ಎರಡು ದಿನಗಳನ್ನು ಕಳೆದನು. ಆಮೇಲೆ ಅವನಿಗೆ ಆ ಮನೆಯೊಂದು ಜೈಲಿನ ಹಾಗೆ ತೋರಿತು. ಮೂರನೇ ದಿನ ಅಹ್ಮದ್ ತನ್ನ ಉದ್ಯೋಗದ ದಿವಾಣಕ್ಕೆ ಹೊರಟು ಹೋದ ಮೇಲೆ, ಪಾದರಸನು ಮನೆಯಿಂದ ಹೊರಗೆ ಜಾರಿಕೊಂಡನು. ಬಾಗ್ದಾದ್ ನಗರದ ನಾಲ್ಕು ಮೂಲೆಗಳವರೆಗೂ ತಿರುಗಾಡಿ ಬರಬೇಕೆಂಬುದು ಅವನ ಉದ್ದೇಶವಾಗಿತ್ತು.

ಅವನು ಸ್ವಲ್ಪದೂರ ಹೋಗುವಷ್ಟರಲ್ಲಿ ಗಂಡು ಉಡುಪುಗಳನ್ನು ಧರಿಸಿ, ತಲೆಯಲ್ಲಿ ಬೆಳ್ಳಿಯ ಪಾರಿವಾಳವಿರುವ ಬಂಗಾರದ ಟೋಪಿಯನ್ನಿಟ್ಟು ಕೊಂಡು ಕುದುರೆಯ ಮೇಲೆ ಕುಳಿತು ಮುದುಕಿಯೊಬ್ಬಳು ಎಲ್ಲಿಗೋ ಹೋಗುತ್ತಿರುವುದನ್ನು ನೋಡಿದನು. ಅವಳ ಹಿಂದೆ ಕೆಂಪು ಜರತಾರೀ ದುಸ್ತುಗಳನ್ನು ಧರಿಸಿದ ನಲುವತ್ತು ಮಂದಿ ನೀಗ್ರೋ ಗುಲಾಮರೂ ಇದ್ದರು. ಇವರು ಬೇರೆಯಾರೂ ಅಲ್ಲ; ದಿಲ್ಶೈಲಾ ಮತ್ತು ಅವಳ ನೌಕರರೇ. ಅವಳು ಆ ದಿನ ಬೆಳಿಗ್ಗೆ ತಾನು ಮಾಡಬೇಕಾದ ಟಪಾಲು ಶೇಖರಣೆಗಾಗಿ ದಿವಾಣದ ವಾರ್ತಾಶಾಖೆಗೆ ಹೋಗಿ ಅಲ್ಲಿಂದ ತನ್ನ ಮನೆಗೆ ಹಿಂದಿರುಗುತ್ತಿದ್ದಳು.

ದಿಲ್ಶೈಲಾ ಪಾದರಸನ ಹೊಸ ಮುಖವನ್ನು ನೋಡಿ ಅವನ ಸೌಂದರ್ಯಕ್ಕೆ ಬೆರಗಾದಳು. ಅವಳ ತೀಕ್ಷ್ಣ ದೃಷ್ಟಿಗೆ ಅವನ ಮುಖದ ಭಾವಭಂಗಿಗಳು ಕಳ್ಳಗುಣದ ಅಹ್ಮದನನ್ನು ನೆನಪಿಗೆ ತಂದುವು. ನಿಜಕ್ಕೂ ಪಾದರಸನು ಅಹ್ಮದನ ಶಿಷ್ಯನಾಗಿದ್ದಾಗ, ಅವನ ಹಾವಭಾವ, ನೋಟ, ಮುಖಭಂಗಿಗಳಲ್ಲಿ ಅವನಿಗೆ ತಿಳಿಯದಂತೆಯೇ ಅಹ್ಮದನ ರೀತಿಗಳು ಅಭ್ಯಾಸವಾಗಿದ್ದುವು. ಅಲ್ಲದೆ ಅವನು ಅಹ್ಮದನ ಮನೆ ಕಡೆಯಿಂದಲೇ ಹೊರಬಿದ್ದುದನ್ನು ಕೂಡಾ ದಿಲ್ಶೈಲಾ ಗಮನಿಸಿದಳು. ಅಹ್ಮದನ ಮನೆಗೆ ಈ ಹೊಸಬನು ಬಂದುದರಿಂದ, ತಾನು ಸ್ವಲ್ಪ ಎಚ್ಚರದಲ್ಲಿರಬೇಕಾಯಿತೆಂದುಕೊಂಡಳು.

ದಿಲ್ಶೈಲಾ ಮನೆಗೆ ಹೋದ ಕೂಡಲೇ ತನ್ನ ಕುಮಾರಿ ಜೀನಾಬಳೊಂದಿಗೆ ತಾನು ನೋಡಿದ ಯುವಕನನ್ನು ವರ್ಣಿಸಿ ಹೇಳಿ, "ಕಳ್ಳ ಅಹ್ಮದ್ ಈ ಯುವಕನನ್ನು ಕರೆಯಿಸಿಕೊಂಡಿದ್ದಾನೆಂದು ಕಾಣುತ್ತೆ. ಅವನು ಬೀದಿಗಳನ್ನು ಆಶ್ಚರ್ಯದಿಂದ ಪರೀಕ್ಷಿಸುವುದನ್ನು ನೋಡಿದರೆ ಈ ದಿನವೋ ನಿನ್ನೆಯೋ ಇಲ್ಲಿಗೆ ಬಂದಿರಬೇಕೆನಿಸುತ್ತೆ. ಎಷ್ಟಾದರೂ ಅಹ್ಮದನಿಗೆ ನಮ್ಮ ಮೇಲೆ ಹಗೆ ಇದೆ. ನಾವು ಈ ಹೊಸಬನ ವಿಷಯದಲ್ಲಿ ಜಾಗರೂಕರಾಗಿರಬೇಕು" ಎಂದಳು.

ತಾಯಿಯ ಮಾತು ಕೇಳಿ ಜೇನಾಬ್ ಸ್ವಲ್ಪ ಹೊತ್ತು ಆಲೋಚಿಸಿ, "ಏನಮ್ಮಾ ನಿನ್ನ ಮಾತು ? ಎಂತೆಂಥವರನ್ನೆಲ್ಲಾ ಲಕ್ಷ್ಯ ಮಾಡದಿರುವ ನೀನು ಇನ್ನೂ ಗಡ್ಡಮೀಸೆ ಸರಿಯಾಗಿಬಾರದ ಒಬ್ಬ ಹುಡುಗ ನನ್ನು ನೋಡಿ ಹೆದರುವಿಯಾ ? " ಎಂದಳು. ಅವಳು ತನ್ನನ್ನು ಸುಂದರವಾಗಿ ಅಲಂಕರಿಸಿಕೊಂಡು, ಕಣ್ಣು ಗಳಿಗೆ ಕಾಡಿಗೆಗೆರೆಯನ್ನು ತಿದ್ದಿ, ಮುಖಕ್ಕೆ ಪಾರದರ್ಶಕ ವಾದ ಬುರಖಾ ಹಾಕಿಕೊಂಡು, ಕೈಯಲ್ಲಿ ಅಂದವಾದ ಚೀಲ ಹಿಡಿದು ನಡೆಯುವ ಮಿಂಚಿನ ಬಳ್ಳಿಯ ಹಾಗೆ ಬೀದಿಯಲ್ಲಿ ನಡೆದಳು.

ಜೇನಾಬ್ ಮೆಲ್ಲನೆ ಅತ್ತ ಇತ್ತ ಗಮನಿಸಿಕೊಂಡು ನಡೆಯುತ್ತ, ಸ್ವಲ್ಪ ದೂರ ಹೋಗಲು, ಒಂದು ಅಂಗಡಿಯ ಮುಂದೆ ನಿಂತಿದ್ದ ಪಾದರಸನನ್ನು ನೋಡಿ ದಳು. ತಾಯಿ ಹೇಳಿದ ವರ್ಣನೆಯ ಮೇಲಿಂದ ಅವನ ಗುರುತು ಹಿಡಿದು, ಅವನ ಬದಿಯಲ್ಲಿ ದೂಡಿದ ಹಾಗೆ ಮುಂದಕ್ಕೆ ಹೋಗಿ ಹಿಂದಿರುಗಿ ಹುಬ್ಬುಗಂಟಿಕ್ಕಿ "ಮುಖದಲ್ಲಿ ಕಣ್ಣಿಲ್ಲದವನು !" ಎಂದಳು ಕೋಪ ದಿಂದ. ಪಾದರಸನು ಅವಳನ್ನು ನೋಡಿ ಅವಳ ಸೌಂದರ್ಯಕ್ಕೆ ಆಶ್ಚರ್ಯಪಟ್ಟು, ಮುಗುಳುನಗುತ್ತ "ಇಂಥಾ ಸೌಂದರ್ಯ ಪ್ರಕಾಶಕ್ಕೆ ಕಣ್ಣು ಕುರುಡಾಗ ದಿರುತ್ತೆಯೆ? ಯಾರ ಕಡೆಯವಳು ನೀನು? " ಎಂದನು. "ನಾನು ಒಬ್ಬ ವರ್ತಕನ ಕುಮಾರಿ, ಇನ್ನೊಬ್ಬ ವರ್ತಕನಿಗೆ ಹೆಂಡತಿ. ನಿಮ್ಮ ರೀತಿ ನೋಡಿದರೆ ಈ ಊರಿಗೆ ಹೊಸಬರಾದಂತಿದೆ. ಎಲ್ಲಿ ನಿಮ್ಮ ವಾಸ ?" ಎಂದು ಕೇಳಿದಳು ಜೇನಾಬ್.

ಅಹ್ಮದನ ವಿಷಯವನ್ನು ಹೇಳಬಾರದೆಂದು ಕೊಂಡು ಪಾದರಸನು "ಇನ್ನೂ ವಾಸ್ತವ್ಯವು ಗೊತ್ತಾಗಲಿಲ್ಲ. ಎಲ್ಲಾದರೂ ಇದೆಯೋ ಹುಡುಕಿ ನೋಡುತ್ತಾ ಇದ್ದೇನೆ" ಎಂದನು.

"ಹಾಗಾದರೆ ನಮ್ಮ ಮನೆಗೆ ಬನ್ನಿ. ನಮ್ಮದು ತುಂಬಾ ದೊಡ್ಡ ಮನೆ. ನನ್ನ ಗಂಡ ಅಂಗಡಿಗೆ ಹೋದರೆ, ಮನೆಯಲ್ಲಿ ನನಗೆ ಜತೆ ಯಾರೂ ಇರೋದಿಲ್ಲ. ಹೆದರಿಕೊಂಡು ಒಬ್ಬಳೇ ಇರಬೇಕಾಗಿದೆ" ಎಂದಳು ಜೇನಾಬ್.






ಅವಳ ಮನೆಯಲ್ಲಿರುವುದು ಒಳ್ಳೆಯದೋ ಕೆಟ್ಟದೋ ಎಂಬ ಅನುಮಾನದಲ್ಲಿ ಪಾದರಸನು ಮೇಲೆ ಕೆಳಗೆ ನೋಡಿದನು. ಈ ನಗರದಲ್ಲಿ ತನ್ನ ಪರಿಚಯದವರು ಯಾರೂ ಇಲ್ಲವೆಂದೂ, ಈ ಹುಡುಗಿ ತನಗೆ ಆಗದವಳೆನ್ನಲು ಯಾವ ಕಾರಣವೂ ಇಲ್ಲವೆಂದೂ ಅಂದುಕೊಂಡು, ಅವಳ ಮನೆಗೆ ಹೋಗಿ ಇವಳೆಂಥವಳೋ ತಿಳಿಯೋಣವೆನಿಸಿತು ಅವನಿಗೆ.

ಅವನು ಆಗಲೆಂದು ತಲೆಯಾಡಿಸಿದ ಮೇಲೆ, ಜೀನಾಬ್ ಅವನನ್ನು ಕೆಲವು ಬೀದಿಗಳಲ್ಲಿ ತಿರುಗಿಸಿ ದೊಡ್ಡದೊಂದು ಮನೆಯ ಮುಂದೆ ನಿಂತು, ಬೀಗದ ಕೈಗಾಗಿ ತನ್ನ ಚೀಲವನ್ನು ಹುಡುಕ ತೊಡಗಿದಳು. ಅದೊಂದು ದೊಡ್ಡ ವರ್ತಕನ ಮನೆಯಾಗಿತ್ತು. ಪ್ರಸ್ತುತ ಮನೆಯಲ್ಲಿ ಯಾರೂ ಇರಲಿಲ್ಲ. ವರ್ತಕನು ಬೆಳಿಗ್ಗೆ ಮನೆಗೆ ಬೀಗ ಹಾಕಿ ಅಂಗಡಿಗೆ ಹೋದರೆ ರಾತ್ರಿಗಷ್ಟೇ ಹಿಂದಿರುಗುವನು. ಅವನ ಹೆಂಡತಿ ಮಕ್ಕಳು ತೌರಿಗೆ ಹೋಗಿದ್ದಾರೆ. ಈ ಸಂಗತಿಗಳೆಲ್ಲಾ ಜೀನಾಬ್‌ಗೆ ಗೊತ್ತಿತ್ತು. "ಅಯ್ಯಯ್ಯೋ! ಈಗೇನು ಗತಿ! ಬೀಗದ ಕೈ ಎಲ್ಲೋ ಬಿದ್ದುಹೋಯಿತು. ಇದನ್ನು ಹೇಗೆ ತೆಗೆಯಲಿ? ನಿಮ್ಮಿಂದೇನಾದರೂ ಸಾಧ್ಯವೇ?" ಎಂದು ಜೀನಾಬ್ ಪಾದರಸನ ಮುಖ ನೋಡಿದಳು.

"ನೋಡುತ್ತೇನೆ" ಎಂದು ಹೇಳಿ ಪಾದರಸನು ಅಷ್ಟು ದೊಡ್ಡ ಅಂಡೆ ಬೀಗವನ್ನು ಹೀಗೆ ತಟ್ಟಿ ಹಾಗೆ ಒತ್ತಿ, ಕೆಳಗಿದ್ದೊಂದು ಕೋಲಿನ ಕೊಕ್ಕೆ ಹಾಕಿ ಗಡಗಡ ವಾಡಿಸಿ ತೆಗೆದುಬಿಟ್ಟನು. ಇವನೊಬ್ಬ ಪಕ್ಕಾ ಕಳ್ಳನೆಂದು ಜೀನಾಬಳಿಗೆ ಗೊತ್ತಾಯಿತು.

ಇಬ್ಬರೂ ಒಳಗೆ ಹೊಕ್ಕರು. "ನೀವು ಈ ಕೋಣೆಯ ಆಸನದಲ್ಲಿ ಕುಳಿತಿರಿ. ನಾನು ಬಾವಿಯಿಂದ ನೀರು ಸೇದಿ ತಂದು ಅಡಿಗೆ ಮಾಡುತ್ತೇನೆ." ಎಂದು ಹೇಳಿ ಜೀನಾಬ್ ಬಿಂದಿಗೆ ಎತ್ತಿಕೊಂಡು ಹಿಂಬದಿಯಲ್ಲಿರುವ ಬಾವಿಯ ಹತ್ತಿರ ಹೋದಳು.

ಸ್ವಲ್ಪ ಹೊತ್ತಿಗೆ ಜೀನಾಬ್ ಬಾವಿಯ ಹತ್ತಿರ ಕೆಟ್ಟ ಸ್ವರದಿಂದ ಕೂಗಿದಳು. ಏನಾಯಿತೋ ಎಂದು ಹೆದರಿ ಪಾದರಸನು ಅವಳ ಬಳಿಗೆ ಓಡಿದನು. ಅವಳು ಬಾವಿಯೊಳಗೆ ಹಗ್ಗ ಇಳಿಸಿ ಬಗ್ಗಿ ನೋಡುತ್ತಾ ಇದ್ದಳು. "ಏನಾಯಿತು?" ಎಂದು ಪಾದರಸನು ಆತುರದಿಂದ ಕೇಳಿದನು.

"ನನ್ನ ವಜ್ರದುಂಗುರ! ಐನೂರು ದಿನಾರು ಸುರಿದು ನನ್ನ ಗಂಡ ನಿನ್ನೆ ತಾನೇ ತಂದದ್ದು. ಸ್ವಲ್ಪ ಸಡಿಲಾಗಿದೆ ಅಂತ ಆಗಲೇ ಹೇಳಿದೆ. ತೆಗೆದಿಟ್ಟು ಬಾವಿಗೆ ಬಿಂದಿಗೆ ಇಳಿಸಬೇಕಿತ್ತು. ಫಕ್ಕನೆ ಜಾರಿ ಬಾವಿಗೆ ಬಿತ್ತಲ್ಲಾ! ಗಂಡನಿಗೆ ಗೊತ್ತಾದರೆ ಪ್ರಾಣ ತೆಗೀತಾರೆ!" ಎಂದು ಜೀನಾಬ್ ತತ್ತರಿಸಿಕೊಂಡು ಬಿಕ್ಕಿ ಬಿಕ್ಕಿ ಹೇಳಿದಳು.

"ಏನೂ ಹೆದರಬೇಡ. ಈಗ ತಾನೇ ಬಿದ್ದದ್ದು ಕೆಸರಿನ ಮೇಲೆ ಇರುತ್ತೆ, ಇಳಿದು ತರುತ್ತೇನೆ" ಎಂದು ಪಾದರಸನು, ದುಸ್ತು ಕಳಚಿ, ರಾಟೆಯ

ದಿಂಡಿಗೆ ಹಗ್ಗವನ್ನು ಕಟ್ಟಿ, ಅದನ್ನು ಹಿಡಿದುಕೊಂಡು ಬಾವಿಯೊಳಗೆ ಇಳಿದನು. ಹಗ್ಗವನ್ನು ಬಿಟ್ಟು ಅವನು ನೀರಿನಲ್ಲಿ ಮುಳುಗಿದ ಕೂಡಲೇ, ಜೀನಾಬ್ ಹಗ್ಗವನ್ನು ಮೇಲಕ್ಕೆ ಎಳೆದು ಹಾಕಿ, "ಇನ್ನು ನಿನ್ನನ್ನು ಅಹ್ಮದ್ ಬಂದು ಮೇಲೆತ್ತುತ್ತಾನೆ. ಅದುವರೆಗೆ ಬಾವಿಯಲ್ಲೇ ತಣ್ಣಗಿರು" ಎಂದು ಹೇಳಿ ಅವನ ದುಸ್ತುಗಳನ್ನು ತೆಗೆದುಕೊಂಡು ತನ್ನ ಮನೆಗೆ ಹೊರಟು ಹೋದಳು.

ಆ ರಾತ್ರಿ ಆ ಮನೆಯ ಯಜಮಾನನಾದ ವರ್ತಕನು ಬಹಳ ತಡವಾಗಿ ತನ್ನ ನೌಕರನೊಂದಿಗೆ ಮನೆಗೆ ಬಂದನು. ಮನೆಯ ಬಾಗಿಲು ಸುಮ್ಮನೆ ಮುಚ್ಚಿರುವುದನ್ನು ನೋಡಿ ಅವನಿಗೆ ಆಶ್ಚರ್ಯವಾಯಿತು. ಒಳಗೆಲ್ಲಾ ಪರೀಕ್ಷಿಸಿ ನೋಡಿದ ಮೇಲೆ ಕಳ್ಳತನವಾಗಿಲ್ಲವೆಂಬುದು ಗೊತ್ತಾಗಿ ಸ್ವಲ್ಪ ಸಮಾಧಾನವಾಯಿತು.

ವರ್ತಕನ ಸ್ನಾನಕ್ಕಾಗಿ ನೌಕರನು ಬಾವಿಗೆ ಹಗ್ಗ ಇಳಿಸಿ ನೀರು ಸೇದಲು ನೋಡಿದನು. ಎಳೆಯುವಾಗ ನೀರಿನ ಬಿಂದಿಗೆ ವಿಪರೀತ ಭಾರವಾಗಿರುವುದನ್ನು ನೋಡಿ, ದಮ್ಮು ಬಿಗಿದು ಎಳೆಯುತ್ತ ದೆವ್ವದ ನೆನಪು ಬಂದು, ಹೆದರಿ ಹಗ್ಗವನ್ನು ಬಾವಿಯ ಕಂಬಕ್ಕೆ ಸುತ್ತಿ, "ಯಾವುದೋ ದೆವ್ವ ದೊರೆಗಳೇ !" ಎಂದು ಕೂಗುತ್ತಾ ಗಾಬರಿಯಿಂದ ಓಡಿದನು. ಅವನ ಕೂಗು ಕೇಳಿ ವರ್ತಕನು ದೀಪ ತೆಗೆದುಕೊಂಡು ಬಾವಿಯ ಹತ್ತಿರ ಬಂದು, ಹಗ್ಗ ಹಿಡಿದುಕೊಂಡು ಮೇಲೆ ಏರುತ್ತಿರುವ ಪಾದರಸನನ್ನು ನೋಡಿ ಕೋಪದಿಂದ, "ಬದ್ಮಾಷ್! ಯಾರು ನೀನು? ನಮ್ಮ ಬಾವಿಯಲ್ಲಿ ನಿನಗೇನು ಕೆಲಸ? ಹೇಳು! ಈಗಲೇ ನಿನ್ನನ್ನು ಭಟರಿಗೆ ಒಪ್ಪಿಸುತ್ತೇನೆ" ಎಂದು ಬೈದಾಡಿದನು.

"ಅಯ್ಯಾ, ಇದು ಯಾವ ದೇಶ? ಯಾವ ಗ್ರಾಮ? ನಾನು ಈಜಿಪ್ಟ್ ದೇಶದವನು. ನಮ್ಮ ನೈಲ್ ನದಿಯಲ್ಲಿ ಸ್ನಾನಮಾಡುತ್ತಾ ಇರುವಾಗ ದೊಡ್ಡದೊಂದು ಸುಳಿಗುಂಡವು ನನ್ನನ್ನು ಕೆಳಕ್ಕೆ ಎಳೆಯಿತು. ನಾನು ಎಷ್ಟು ಆಳಕ್ಕೆ ಹೋದೆನೋ ನನಗೇ ಗೊತ್ತಿಲ್ಲ. ಮತ್ತೆ ನೀರಿನ ಮೇಲೆ ತೇಲುವಾಗ ಈ ಬಾವಿಯಲ್ಲಿದ್ದೇನೆ!" ಎಂದು ಪಾದರಸನು ಅದ್ಭುತವಾಗಿ ಸುಳ್ಳಾಡಿದನು.

ಅವನ ಸುಳ್ಳನ್ನು ವರ್ತಕನು ನಂಬಿದುದರಿಂದ ಕೋಪವೆಲ್ಲಾ ಇಳಿದು, ಪರಿತಾಪವಾಗಿ ಮಾರ್ಪಟ್ಟಿತು. "ಅಪ್ಪಾ, ನಿನ್ನ ಅನುಭವ ಬಹಳ ವಿಚಿತ್ರವಾಗಿದೆ. ಇದು ಬಾಗ್ದಾದ್ ನಗರ. ಬಹಳ ದೂರಕ್ಕೆ ಬಂದಿರುವಿ. ಮೊದಲು ಒಣಬಟ್ಟೆ ಕೊಡುತ್ತೇನೆ, ಕಟ್ಟಿಕೋ. ಈ ರಾತ್ರಿ ಇಲ್ಲೇ ಊಟ ಮಾಡಿ ಮಲಗು. ನಾಳೆ ನಿನ್ನ ನಗರಕ್ಕೆ ಪ್ರಯಾಣ ಮಾಡಬಹುದು" ಎಂದನು ವರ್ತಕ.

(ಇನ್ನೂ ಇದೆ)



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

**ಗೆದ್ದ ಶೀರ್ಷಿಕೆಗಳು ೧೯೮೧ ಸೆಪ್ಟೆಂಬರ್ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ**







P. Sundaram M. Natarajan

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.

★ ಜೂಲೈ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.

★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪಾಯಿ ೨೫ ಬಹುಮಾನ.

★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಅದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦ ೦೨೬

---

### ಮೇ ಸ್ಪರ್ಧೆಯ ಫಲಿತಾಂಶ:

ಮೊದಲನೇ ಫೋಟೋ: ಬಿದ್ದಿರೋ ಬುಟ್ಟೀ ಒಳಗೆ!

ಎರಡನೇ ಫೋಟೋ: ಬಿದ್ದೆವೆಲ್ಲರೂ ಫೋಟೋದೊಳಗೆ!

ಕಳುಹಿಸಿದವರು: ಕೆ. ಮಾಲಿಂಗಭಟ್

ಕೊಳ್ಯೂರು, ಮಂಜೇಶ್ವರ

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 188, Arcot Road, Madras-600 026 (India). Controlling Editor: NAGI REDDI.

---

## ಮುಖ್ಯವಾಗಿ ಗಮನಿಸಿರಿ

'ಚಂದಮಾಮ' ಪತ್ರಿಕೆಗೆ ಸಂಬಂಧಪಟ್ಟ ಚಂದಾ, ಏಜನ್ಸೀ ಡಿಪಾಜಿಟ್ಸ್, ಇಂಡೆಂಟು ಮೊಬಲಗು, ಪ್ರಕಟನೆಯ ಚಾರ್ಜು ಮೊದಲಾದುವುಗಳನ್ನೆಲ್ಲಾ ಕೆಳಗಿನ ವಿಳಾಸಕ್ಕೇ ಕಳುಹಿಸಿರಿ.

*

## ಡಾಲ್ಟನ್ ಏಜನ್ಸೀಸ್

ಚಂದಮಾಮ ಬಿಲ್ಡಿಂಗ್ಸ್
ವಡಪಳನಿ, ಮದರಾಸು-೬೦೦ ೦೨೬




# ಇನ್ನು ಮೋಸಗೊಳಿಸಲು ಸಾಧ್ಯವಿಲ್ಲ!

## ಅಪ್ಪಟ ಪಾಪಿನ್ಸ್‌ಗಳಿಗೆ

ಈಗ ಬೆಳ್ಳಿ
ಪಟ್ಟೆಗಳ ಹೊದಿಕೆಯಿದೆ!

ಮುದ್ದು ಮಕ್ಕಳೇ! ಇಗೋ ಇಲ್ಲಿದೆ ನಿಮಗೆ ಸಿಹಿ ಸಿಹಿ ಸುದ್ದಿ! ಇನ್ನು ಮುಂದೆ ಯಾರೂ ನಿಮ್ಮನ್ನು ಮೋಸಗೊಳಿಸುವಂತಿಲ್ಲ. ಆದರೆ ಒಂದು ಮಾತ್ರ ನೆನಪಿಟ್ಟುಕೊಳ್ಳಿರಿ. ಕೊಳ್ಳುವ ಮೊದಲು, ಪಾರ್ಲೆ ಪಾಪಿನ್ಸ್‌ನ ಬಣ್ಣ ಬಣ್ಣದ ಫಾಯ್ಲ್ ಪ್ಯಾಕ್‌ನ ಮೇಲೆ ಬೆಳ್ಳಿ ಪಟ್ಟೆಗಳಿವೆಯೋ ಎಂದು ನೋಡಿಕೊಳ್ಳಿರಿ. ಆಮೇಲೆ ಪಾಪಿನ್ಸ್ ಬಾಯಿಯಲ್ಲಿ ಹಾಕಿಕೊಂಡು ಅದರ ಹಣ್ಣಿನಂಥ ಸ್ವಾದದ ಮೋಜು ನೋಡಿರಿ!




ಪಾರ್ಲೆ

## ಪಾಪಿನ್ಸ್

ಈಗ,
ನಕಲಿಗಾರರು ನಿಮ್ಮನ್ನು
ಮೋಸಗೊಳಿಸುವಂತಿಲ್ಲ.

everest/81/PP/101/kn